# ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ

(ಗುಲ್ಬರ್ಗಾ ನಗರವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿರುವ ಸಂಪ್ರಬಂಧ)

ಸಂಶೋಧಕ
ಅಲಂಕಾರ್ ಅನಿಲ್

ಮಾರ್ಗದರ್ಶಕರು
ಡಾ.ಎಲ್.ಶ್ರೀನಿವಾಸ್
ಸಹಾಯಕ ಪ್ರಾಧ್ಯಾಪಕರು



ಸಮಾಜ ವಿಜ್ಞಾನ ನಿಕಾಯ
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೧೦

# "ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ"

(ಗುಲ್ಬರ್ಗಾ ನಗರವನ್ನು ಅನುಲಕ್ಷಿಸಿ)

( ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿರುವ ಸಂಪ್ರಬಂಧ)



ಸಂಶೋಧಕ

**ಅಲಂಕಾರ್ ಅನಿಲ್**

ಮಾರ್ಗದರ್ಶಕರು

**ಡಾ.ಎಲ್.ಶ್ರೀನಿವಾಸ್**

ಸಹಾಯಕ ಪ್ರಾಧ್ಯಾಪಕರು



**ಸಮಾಜ ವಿಜ್ಞಾನ ನಿಕಾಯ**

**ಮಾನವಶಾಸ್ತ್ರ ವಿಭಾಗ**

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬

೨೦೦೯-೧೦

## ಮಾರ್ಗದರ್ಶಕರ ದೃಢೀಕರಣ ಪತ್ರ

"ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ" (ಗುಲ್ಬರ್ಗಾ ನಗರವನ್ನು ಅನುಲಕ್ಷಿಸಿ) ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್, ಪದವಿಗಾಗಿ ಅಲಂಕಾರ ಅನಿಲ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 9-9-10.

ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ.ಎಲ್.ಶ್ರೀನಿವಾಸ

ಮಾರ್ಗದರ್ಶಕರು

ಮಾನವಶಾಸ್ತ್ರ ವಿಭಾಗ

## ಸಂಶೋಧಕರ ಪ್ರಮಾಣ ಪತ್ರ

"ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ" (ಗುಲ್ಬರ್ಗಾ ನಗರವನ್ನು ಅನುಲಕ್ಷಿಸಿ) ಎಂಬ ಸಂಪ್ರಬಂಧವನ್ನು ಅಲಂಕಾರ ಅನಿಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್, ಪದವಿಗಾಗಿ ಮಾನವಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಲಿ, ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ : 9-9-10,
ಸ್ಥಳ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅಲಂಕಾರ ಅನಿಲ
ಸಂಶೋಧಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

"ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ" (ಗುಲ್ಬರ್ಗಾ ನಗರವನ್ನು ಅನುಲಕ್ಷಿಸಿ) ಎಂಬ ಸಂಶೋಧನೆ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿ ಗಾಗಿ ಸಲ್ಲಿಸುತ್ತಿದ್ದೇನೆ. ಈ ಸಂದರ್ಭದಲ್ಲಿ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಹಾಗೂ ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರತಿಯೊಂದು ವಿಷಯ ಕುರಿತು ಮಾರ್ಗದರ್ಶನ ಮಾಡಿದ ಮತ್ತು ಮಾರ್ಗದರ್ಶಕರು ಆಗಿರುವ ಡಾ.ಎಲ್.ಶ್ರೀನಿವಾಸ್ ಅವರಿಗೂ ಹಾಗೂ ಅಧ್ಯಾಯನದ ಅವಧಿಯಲ್ಲಿ ಕ್ರಮಬದ್ಧತೆಯನ್ನು ಪರಿಪಾಲಿಸುವಂತೆ ಸಲಹೆ ಸೂಚನೆ ನೀಡಿದ ವಿಭಾಗ ಮುಖ್ಯಸ್ಥರಾದ ಡಾ.ತಾರಿಹಳ್ಳಿ ಹನುಮಂತಪ್ಪ ಅವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ನನ್ನ ಎಂ.ಫಿಲ್ ಅಧ್ಯಯನದಲ್ಲಿ ಸಹಕರಿಸಿದ ವಿಭಾಗದ ಸಿಬ್ಬಂದಿಗಳಾದ ಶ್ರೀ ಪಂಪಾಪತಿಯವರಿಗು, ರಮೇಶರವರಿಗೂ ಹಾಗೂ ಗಾದಿಲಿಂಗಪ್ಪನವರಿಗೂ ಇತರೆ ಸಿಬ್ಬಂದಿಗಳಿಗೂ ಅನಂತ ಕೃತಜ್ಞತೆಗಳು.

ನನ್ನ ವಿದ್ಯಾಭ್ಯಾಸಕ್ಕೆ ಬೆನ್ನೆಲುಬಾಗಿ ನಿಂತರುವ ನನ್ನ ತಂದೆಯವರಾದ ಅಲಂಕಾರ ರೇವಣಸಿದ್ಧಪ್ಪ, ತಾಯಿ ನೀಲಮ್ಮ, ಅಣ್ಣ ರಾಕೇಶ, ಅತ್ತಿಗೆ ವಿದ್ಯಾವತಿ, ತಂಗಿ ಲತಾಶ್ರೀ, ಸಿಂಚನ ಮತ್ತು ಅಂಗನವಾಡಿ ಕಾರ್ಯಕರ್ತೆಯರ ಬಗ್ಗೆ ಸಮಗ್ರ ಮಾಹಿತಿ, ಸಲಹೆ, ಸೂಚನೆ ನೀಡಿರುವ ಚೆನ್ನಮ್ಮ ಟೀಚರ್ ಅವರಿಗೂ ನನ್ನ ಅಭಿನಂದನೆಗಳು.

ನನ್ನ ಎಂ.ಫಿಲ್ ಅಧ್ಯಯನಕ್ಕೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯ ಮಾಡಿರುವ ಗೆಳೆಯರಾದ ಸುನೀಲ, ಮಹಾದೇವ, ಪ್ರವೀಣ, ಪ್ರಸನ್ನ, ಕಲಿಮಾರ, ಉಪೇಂದ್ರ, ಕೃಷ್ಣಪ್ಪ, ಸಿದ್ಧರಾಮ, ಕುಮಾರ ಇವರೆಲ್ಲರಿಗೂ ನನ್ನ ವಂದನೆಗಳು.

ಅಕ್ಷರ ಸಂಯೋಜನೆ ಮಾಡಿಕೊಟ್ಟ ಮಾನಸ ಗ್ರಾಫಿಕ್ಸ್‌ಗೂ ವಂದನೆಗಳು.

*ಅಲಂಕಾರ ಅನಿಲ*

# ಪರಿವಿಡಿ

ಅಧ್ಯಾಯ ಒಂದು ೦೧-೧೪
೧.೧. ಪೀಠಿಕೆ
೧.೨. ಅಂಗನವಾಡಿ ಹುಟ್ಟು-ಬೆಳವಣಿಗೆ
೧.೩. ಅಧ್ಯಯನ ಕ್ಷೇತ್ರ ಪರಿಚಯ
೧.೪. ಅಧ್ಯಯನದ ಗುರಿ-ಉದ್ದೇಶ

ಅಧ್ಯಾಯ ಎರಡು ೧೫-೨೯
೨.೧. ಅಂಗನವಾಡಿ ಯುನಿಸೆಫ್ ನೀಡಿದ ಕೊಡುಗೆ
೨.೨. ಅಂಗನವಾಡಿ ಕಾರ್ಯಕರ್ತೆಯರ ಕೆಲಸ-ಕಾರ್ಯಗಳು
೨.೩. ಅಂಗನವಾಡಿಯಲ್ಲಿ ಇರಬೇಕಾದ ದಾಖಲೆಗಳ ರಿಜಿಸ್ಟರುಗಳು
೨.೪. ಇಲಾಖೆ ರಚನೆ

ಅಧ್ಯಾಯ ಮೂರು ೩೦-೬೧
೩.೧. ಸಮಗ್ರ ಬಾಲವಿಕಾಸ ಯೋಜನೆಯ ಪರಿಚಯ
೩.೨. ಅಂಗನವಾಡಿ ಕಾರ್ಯಕರ್ತೆಯರ ಒಂದು ವಿವರ
೩.೩. ಅಂಗನವಾಡಿ ಕಾರ್ಯಕರ್ತೆಯ ಚಟುವಟಿಕೆ

ಅಧ್ಯಾಯ ನಾಲ್ಕು ೬೨-೮೩
೪.೧. ಸ್ತ್ರೀ ಶಕ್ತಿ
೪.೨. ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳು
೪.೩. ಅಂಗನವಾಡಿ ಕಾರ್ಯಕರ್ತೆಯ ಸಮಸ್ಯೆಗಳ ಪರಿಹಾರೋಪಾಯಗಳು
೪.೪. ಅಂಗನವಾಡಿ ಕಾರ್ಯಕರ್ತೆಯರ ಸರಕಾರಿ ಸೌಲಭ್ಯಗಳು
೪.೫. ಪ್ರಶ್ನಾವಳಿಗಳು

ಅಧ್ಯಾಯ ಐದು ೮೪-೮೭
ಉಪಸಂಹಾರ

ಅನುಬಂಧ ೮೮
೧. ಆಧಾರ ಗ್ರಂಥಗಳು
೨. ಛಾಯಾಚಿತ್ರಗಳು

# ಅಧ್ಯಾಯ ಒಂದು

೧. ಪೀಠಿಕೆ

೨. ಅಂಗನವಾಡಿ ಹುಟ್ಟು - ಬೆಳವಣಿಗೆ

೩. ಅಧ್ಯಯನ ಕ್ಷೇತ್ರ ಪರಿಚಯ

೪. ಅಧ್ಯಯನ ಗುರಿ ಮತ್ತು ಉದ್ದೇಶ

# ಅಧ್ಯಾಯ ಒಂದು

೧.೧. ಪೀಠಿಕೆ:

ವೇದಗಳ ಕಾಲದಲ್ಲಿ ಸಮಾಜವು ಸ್ತ್ರೀ-ಪುರುಷರಿಗೆ ಸರಿಸಮಾನವಾದ ಸ್ಥಾನಮಾನವನ್ನು ನೀಡಿತ್ತು. ಪ್ರತಿಯೊಂದು ಚಟುವಟಿಕೆಯಲ್ಲಿಯೂ ಸ್ತ್ರೀ-ಪುರುಷರು ಭಾಗವಹಿಸುತ್ತಿದ್ದರು. ಪುರುಷ ಮಾಡುವ ಯಜ್ಞಯಾಗಾದಿಗಳಲ್ಲಿ ಸ್ತ್ರೀ ಭಾಗವಹಿಸಬೇಕಾಗಿತ್ತು. ತನ್ನ ಪತ್ನಿಯನ್ನು ಬದಿಯಲ್ಲಿರಿಸಿಕೊಂಡೇ ಯಜ್ಞಯಾಗಾದಿ ಕಾರ್ಯಗಳನ್ನು ಮಾಡಿದರೆ ದೇವತೆಗಳು ಸುಪ್ರಸನ್ನರಾಗುವರೆಂದು ಋಗ್ವೇದದಲ್ಲಿ ಹೇಳಿದೆ. ಅಲ್ಲದೆ ತಾನು ಯಜ್ಞವೇದಿಕೆಯನ್ನು ಹತ್ತಬೇಕಾದರೂ ತನ್ನ ಪತ್ನಿಯ ಅಪ್ಪಣೆಯನ್ನು ಪಡೆಯಬೇಕಾಗಿತ್ತು. ಆತನು ತನ್ನ ಪತ್ನಿಯನ್ನು ಅರ್ಧಾಂಗಿಯೆಂದು ಭಾವಿಸುವುದಲ್ಲದೇ, ತನ್ನ ಸಂತಾನದ ಏಳಿಗೆಗೆ ಗೌರವದಿಂದ, ಪ್ರೀತಿಯಿಂದ ಕಾಣಬೇಕಾಗಿತ್ತು.

ಸ್ತ್ರೀ ಶಿಶುಗಳ ಜನನಕ್ಕಾಗಿ ಯಜ್ಞಗಳನ್ನು ಮಾಡುತ್ತಿದ್ದರೆಂಬ ಉಲ್ಲೇಖವಿದೆ. ಮಕ್ಕಳಿಗೆ ಉಪದೇಶ ಕೊಡಲು ತಂದೆಗಿಂತಲೂ ತಾಯಿಗೆ ಹೆಚ್ಚಿನ ಅಧಿಕಾರವಿತ್ತೆಂದು ಹೇಳಿದೆ. ಆದ್ದರಿಂದ 'ಸ್ತ್ರೀ' ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಅತ್ಯಂತ ಗೌರವಪೂರ್ಣ ಸ್ಥಾನ ಪಡೆದಿದ್ದಳೆಂದು ತಿಳಿದುಬರುತ್ತದೆ.

ಋಗ್ವೇದದ ಕೆಲವು ಮಂತ್ರಗಳನ್ನು ಲೋಪಾಮುದ್ರಾ, ವಿಶ್ವಾವರು ಮತ್ತು ಘೋಷಾ ಮುಂತಾದವರು ರಚಿಸಿದರೆಂಬ ಪ್ರತೀತಿ ಇದೆ. ಇವರು ವಿದ್ವಾಂಸರೂ ಆಗಿದ್ದರೆಂದು ಹೇಳಲಾಗಿದೆ. ಸ್ತ್ರೀಯರು ಸ್ವತಂತ್ರರಾಗಿದ್ದರಲ್ಲದೆ ಪುರುಷರೊಡನೆ ಸಮಾನ ಅಂತಸ್ತನ್ನು ಪಡೆದಿದ್ದರು.

ಮಹಾಕಾವ್ಯಗಳ ಕಾಲದಲ್ಲಿಯೂ ಸ್ತ್ರೀಯರಿಂದಲೇ ಧರ್ಮ ಉದ್ಧಾರವಾಗುವುದೆಂದೂ ಅವರು ಪುರುಷ ಸಹಧರ್ಮಿಣಿಯರಾಗಿದ್ದುಕೊಂಡು ತಮ್ಮ ಪತಿಯನ್ನು ಧರ್ಮಮಾರ್ಗಪಾರಾಯಣರನ್ನಾಗಿ ಮಾಡುತ್ತಿದ್ದರೆಂದೂ ರಾಮಾಯಣ, ಮಹಾಭಾರತಗಳಲ್ಲಿ ಉಲ್ಲೇಖಗಳಿವೆ.

ಪಿತಾ ರಕ್ಷಿತಿ ಕೌಮಾರೇ, ಭರ್ತಾ ರಕ್ಷತಿ ಯೌವನೆ
ರಕ್ಷಂತಿಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ

ಸ್ತ್ರೀಯಾದವಳು ಬಾಲ್ಯದಲ್ಲಿ ತಂದೆಯ ಅಧೀನದಲ್ಲಿ, ಯೌವನದಲ್ಲಿ ಗಂಡನ ಅಧೀನದಲ್ಲಿ, ಮುಪ್ಪಿನಲ್ಲಿ ಮಕ್ಕಳ ವಶದಲ್ಲಿ ಜೀವನವನ್ನು ಸಾಗಿಸುತ್ತಾಳೆ ಎಂದು ಅರ್ಥ ನೀಡುತ್ತದೆ.

"ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೇ ತತ್ರ ದೇವತಾ:"

ಸ್ತ್ರೀಯರನ್ನು ಎಲ್ಲಿ ಗೌರವಿಸಲಾಗುತ್ತದೆಯೋ ಅಲ್ಲಿ ದೇವತೆಗಳು ವಾಸಿಸುವರೆಂದು ಹೇಳಲಾಗಿದೆ. ಮಧ್ಯಯುಗದಲ್ಲೂ ಸ್ತ್ರೀಯರಿಗೆ ಗೌರವದ ಸ್ಥಾನಮಾನಗಳಿದ್ದುದನ್ನು ಶಾಸನಗಳು ಹೇಳುತ್ತವೆ. ಪಂಪ, ಬಿಲ್ಹಣ, ಚಾಮರಸ ವಿದೇಶಿ ಪ್ರವಾಸಿಗಳಾದ ಪ್ಯಾಸ್ ಫಾರ್ನಾವೊನ್ನುನಿಝು ಮೊದಲಾದವರು ಕೃತಿಗಳಿಂದಲ್ಲೂ ಈ ಮಾತನ್ನು ಅರಿಯಬಹುದಾಗಿದೆ. ಸ್ತ್ರೀಯರಲ್ಲಿ ಬಲ ದಕ್ಷತೆಗಳ ಸುಪ್ತವಾಹಿನಿಯಾಗಿರುತ್ತವೆ. ಸಂದರ್ಭನುಸಾರ ಅವು ಪ್ರಕಟವಾದಾಗಲೇ ಆ ಸಾಮರ್ಥ್ಯದ ಅರಿವಾಗುತ್ತಿತ್ತು. ಅತ್ತಿಮಬ್ಬೆ, ಅಕ್ಕಾದೇವಿ, ಅಕ್ಕಮಹಾದೇವಿ, ಅಚಲೆ, ಸಾವಿಯಬ್ಬೆ, ಶಾಂತಲೆ ಅಬ್ಬಕ್ಕ, ಕೆಳದಿ ಚನ್ನಮ್ಮ, ಬೆಳವಡಿ ಮಲ್ಲಮ್ಮ, ಚಾಂದ್‌ಬೀಬಿ, ಮೊದಲಾದವರು ತಮ್ಮ ತ್ಯಾಗ, ಕಲೆ, ವಿರಕ್ತಿ, ಧೈರ್ಯ, ಸಾಹಸಗಳಿಂದಲೇ ಅಜರಾಮರರಾಗಿದ್ದಾರೆ. ಅಗ್ರಹಾರ, ಊರು, ನಾಡು, ಮಂಡಲ, ಮಹಾಮಂಡಲಗಳ ಆಡಳಿತಗಾರರಾಗಿ ಹಲವಾರು ರಾಣಿಯರು ಮಿಗಿಲೆನಿಸಿದ್ದಾರೆ.

ಸ್ತ್ರೀಯರ ವ್ಯಕ್ತಿತ್ವದಲ್ಲಿ ಅಡಕವಾಗಿರುವ ಉನ್ನತ ಸಾಮರ್ಥ್ಯಗಳನ್ನು ಎಂದರೆ ತಾಯ್ತನದ ಹಿರಿಮೆ, ಸ್ತ್ರೀ ಸಹಜವಾದ ಮೃದು ಮಧುರ ಸ್ವಭಾವ, ಸಹನಶೀಲತೆ, ಕಷ್ಟ ಸಹಿಷ್ಣುತೆ, ಕಲಾಕೌಶಲ್ಯ, ಸ್ನೇಹಪರತೆ ಮುಂತಾದವುಗಳ ಹಿರಿಮೆಯಾಗಿದ್ದಾಳೆ. ಗಾಂಧೀಜಿಯವರು ತಮ್ಮ ನಾಯಕತ್ವದಲ್ಲಿ ಸ್ವರಾಜ್ಯ ಸಂಗ್ರಾಮದಲ್ಲಿ ರಾಜಕೀಯ ಹೋರಾಟದಲ್ಲಿ ಭಾಗವಹಿಸಲು ಸ್ತ್ರೀಯರಿಗೆ ಕರೆ ಕೊಟ್ಟರು. ಸ್ತ್ರೀಯರನ್ನು ಮುಂದಾಳುಗಳನ್ನಾಗಿ ಮಾಡಿದ್ದರು. ಎಷ್ಟೋ ಜನ ಶ್ರೀಮಂತ ಸ್ತ್ರೀಯರು ಸಂಗ್ರಾಮಕ್ಕೆ ದುಮುಕಿದರು. ಒಂದು ಬಾರಿ ಉಪ್ಪಿನ ಸತ್ಯಾಗ್ರಹದಲ್ಲಿ ಸ್ತ್ರೀಯರ ನ್ಯಾಯಾಲಯದ ಮುಖ್ಯಾಧಿಕಾರಿಗಳು ಉಪ್ಪನ್ನು ಮಾರಿ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿದ್ದರು. ಸ್ತ್ರೀ ಮುಂದಾಳುಗಳಾಗಿ ಸರೋಜಿನಿ ನಾಯ್ಡು, ವೀರಯಕ್ಷ್ಮಿ ಪಂಡಿತ, ಕಸ್ತೂರ ಬಾ, ಅನಿಬೆಸೆಂಟ್, ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ರಾಜಕುಮಾರಿ ಅವೃತಕಾರ, ಶ್ರೀಮತಿ ದುರ್ಗಾಬಾಯಿ ಮುಂತಾದವರು ಹೆಸರಾಗಿದ್ದಾರೆ.

ಒಂದು ದೇಶದ ಅಭಿವೃದ್ಧಿಗೆ ಪುರುಷ ಎಷ್ಟು ಪ್ರಮುಖ ಪಾತ್ರವನ್ನು ವಹಿಸುತ್ತಾನೋ, ಅಷ್ಟೇ ಪ್ರಮುಖ ಪಾತ್ರವನ್ನು ಸ್ತ್ರೀ ವಹಿಸುತ್ತಾಳೆ. ಸ್ತ್ರೀಯರಲ್ಲೂ ಸರ್ವತೋಮುಖವಾದ ಮತ್ತು ಕ್ರಾಂತಿಕಾರಕವಾದ ಬದಲಾವಣೆಗಳು ಕಂಡುಬರುತ್ತವೆ. ಇಂದು ಸ್ತ್ರೀಯರು ಉನ್ನತವಾದ ಜವಾಬ್ದಾರಿಯುತವಾದ ಅಧಿಕಾರ ಪೀಠಗಳನ್ನು ಅಲಂಕರಿಸಿದ್ದಾರೆ. ಇದೇ ರೀತಿ ಶೈಕ್ಷಣಿಕ ಕ್ಷೇತ್ರದಲ್ಲಿಯೂ ಅಸಂಖ್ಯ ಸ್ತ್ರೀಯರು ಸಾಮಾನ್ಯ ಶಿಕ್ಷಕರು, ಸಂಸ್ಕೃತಿಯನ್ನು ಅಧ್ಯಯನ ಮಾಡಲು ವಿಶೇಷ ಅವಕಾಶಗಳು ದೊರೆತಿವೆ.

ಸೂಕ್ಷ್ಮವಾಗಿ ಗಮನಿಸಿದರೆ ಭಾರತೀಯ ಮಹಿಳೆ ಅಂದಿಗೂ ಇಂದಿಗೂ ಕುಟುಂಬದ ಸಂರಕ್ಷಣೆಯ ಭಾರವನ್ನು, ಬರಲಿರುವ ಪೀಳಿಗೆಯನ್ನು ಸಮರ್ಥವಾಗಿ ಪಾಲನೆ-ಪೋಷಣೆ ಮಾಡುವ ಹೊಣೆಯನ್ನು ಪ್ರಧಾನವಾಗಿಯೇ ಪರಿಗಣಿಸಿ ನಡೆದಿದ್ದಾಳೆಂಬುದು ತಿಳಿಯುತ್ತದೆ. ತನ್ನ ವ್ಯಕ್ತಿತ್ವ ವಿಕಾಸಕ್ಕೆ ಹೊರಗಿನ ಉದ್ಯೋಗ ನೌಕರಿಗಳ ನೆರವಿಗೆ ಬರುವ ಬಹುತೇಕ ಸಂದರ್ಭಗಳನ್ನು ಕೂಡ ಬಿಟ್ಟುಕೊಡಲು ಅವಳು

ತಯಾರಾಗಿಯೇ ಇರುತ್ತಾಳೆ. "ಮಹಿಳೆಯರು ಸ್ವಂತಃ ಸಾಧನೆಗಳ ಮೇಲೆ ತಾವಾಗಿಯೇ ನಿರ್ಬಂಧಗಳನ್ನು ಹೇರಿಕೊಂಡಿದ್ದಾರೆ." ನಮ್ಮ ಮಹಿಳೆಯರ ಪಾಲಿಗೆ ಉದ್ಯೋಗ ಎಂದರೆ ಒಂದು ನೌಕರಿ ಎಂದಷ್ಟೇ ಹೊರತು, ಅದು ತಮ್ಮ ಸಾಧೆಯ ಕ್ಷೇತ್ರ ತಮ್ಮನ್ನು ಇಡೀಯಾಗಿ ತೊಡಗಿಸಿಕೊಂಡು ಬೆಳೆಯಬೇಕಾದ ಅವಕಾಶ ಎನ್ನುವಂಥದ್ದಾಗಲಾರದ್ದು, ತನ್ನ ಸಂಸಾರದಲ್ಲಿ ಹೆಂಡತಿಯಾಗಿ, ತಾಯಿಯಾಗಿ, ಗೃಹಿಣಿಯಾಗಿ ತಾನು ನಿರ್ವಹೊಸಬೇಕಾದ ಹೊಣೆಯನ್ನು ಅವಳು ಪ್ರಧಾನವಾಗಿ ಭಾವಿಸಬೇಕಾಗುತ್ತದೆಯಾಗಿ, ಹೊರಗೆ ಸ್ವತಂತ್ರ ಜವಾಬ್ದಾರಿಯ ಉನ್ನತ ಹುದ್ದೆಗಳನ್ನು ಒಪ್ಪಿಸಿಕೊಳ್ಳಲು ಹೋಗುವುದಿಲ್ಲ. ಅವಳು ಉನ್ನತ ಉದ್ಯೋಗಳನ್ನು ಅರ್ಹತೆಗಳನ್ನು ಹೊಂದಿದ್ದರು ಪೂರ್ಣ ಕಾಲದ ಅಧ್ಯಾಯನದ ಸಂಶೋಧನೆಗಳ ಅವಕಾಶಗಳನ್ನು ಸರಿಸಿ ಅರೆಕಾಲಿಕ ಅಧ್ಯಾಪಕಿಯಾಗುತ್ತಾಳೆ. ವೈದ್ಯ, ನ್ಯಾಯಶಾಸ್ತ್ರಗಳತಹ ವಿಶೇಷ ಪರಿಣತಿಯನ್ನು ಬೇಡುವ ಕ್ಷೇತ್ರಗಳಲ್ಲಿನ ಪದವಿಗಳಲ್ಲಿ ರ್‍ಯಾಂಕ್, ಪಡೆದ ಪ್ರತಿಭಾವಂತೆಯರು ತಮ್ಮ ವೃತ್ತಿಗಳಲ್ಲಿ ಸ್ವತಂತ್ರ್ಯವಾಗಿ ತೊಡಗಿ ಬೆಳೆಯುವ ಅವಕಾಶಗಳನ್ನು ನಿರಾಕರಿಸಿ ಯಾವುದೇ ನರ್ಸಿಂಗ ಹೋಂನಲ್ಲಿ ಸಹಾಯಕರೆನಿಸಿ ದುಡಿಯುವುದನ್ನು ಆಯ್ದುಕೊಳ್ಳುತ್ತಾರೆ.

ಸ್ತ್ರೀಯರು ಇಂದು ಎಲ್ಲ ರಂಗದಲ್ಲೂ ಮುಂದುವರೆಯುತ್ತಿರುವುದನ್ನು ನಾವು ನೋಡಬಹುದು. ಶಿಕ್ಷಕರು, ವೈದ್ಯರು, ದಾದಿಯರು, ವಕೀಲರು, ಮಂತ್ರಿ, ಬ್ಯಾಂಕಿಂಗ್, ಕೃಷಿ, ವ್ಯಾಪಾರ, ದೂರ ಸಂಪರ್ಕ, ಪ್ರವಾಸೋದ್ಯಮ, ಸಾರಿಗೆ, ಅಂಗನವಾಡಿ ಕಾರ್ಯಕರ್ತೆಯಾಗಿ ಮುಂತಾದ ಕ್ಷೇತ್ರಗಳಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

### ೧.೨. ಅಂಗನವಾಡಿ ಹುಟ್ಟು - ಬೆಳವಣಿಗೆ

ನಾಲ್ಕರಿಂದ ಆರು ವರ್ಷದೊಳಗಿನ ಮಕ್ಕಳಿಗೆ ಶಿಕ್ಷಣ ನೀಡುವ ವ್ಯವಸ್ಥೆಯನ್ನು ಕಿಂಡರ್ ಗಾರ್ಟನ್ ಎನ್ನುತ್ತಾರೆ. ಆಟ ಪಾಠಗಳ ಮೂಲಕ ಮಗು ಇತರ ಮಕ್ಕಳೊಡನೆ ಬೆರೆತು, ಸೃಜನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲಿ ಎಂಬುದು ಇದರ ಉದ್ದೇಶ. ಇಲ್ಲಿ ಹೆಚ್ಚಾಗಿ ಮಗುವಿನ ಮಾನಸಿಕ ಬೆಳವಣಿಗೆಗೆ ಒತ್ತು ನೀಡಲಾಗುತ್ತದೆ.

೧೯ನೇ ಶತಮಾನದಲ್ಲಿ ಬ್ರಿಟನ್ನಿನ ರಾಬರ್ಟ್ ಓವನ್, ಸ್ವಿಟ್ಜರ್‌ಲೆಂಡ್‌ನ ಪೆಸ್ಟಾಲೊಜಿ, ಜರ್ಮನಿಯ ಫ್ರೊವೆಲ್, ಇಟಲಿಯ ಮಾರಿಯಾ ಮಾಂಟೆಸ್ಸೊರಿ ಅವರ ಪ್ರಯತ್ನದಿಂದ ಕಿಂಡರ್ ಗಾರ್ಟನ್ ಒಂದು ವ್ಯವಸ್ಥಿತ ರೂಪ ಪಡೆಯಿತು.

ಬ್ರಿಟನ್ನಿನಲ್ಲಿ ನಡೆದ ಕೈಗಾರಿಕಾ ಕ್ರಾಂತಿಯಿಂದ ಹೊರಬಂದ ಕಾರ್ಖಾನೆ ಕಾಯ್ದೆ ಪ್ರಕಾರ ಬಾಲ ಕಾರ್ಮಿಕರ ದುಡಿಮೆಯನ್ನು ನಿಷೇಧಿಸಲಾಯಿತು. ಅದರಿಂದ ಕುಟುಂಬ ನಿರ್ವಹಣೆಗೆ ಮಹಿಳೆಯರು ದುಡಿಯುವಂತಾಯಿತು. ಕುಟುಂಬದ ಸದಸ್ಯರು ಹೆಚ್ಚು ಸಮಯ ಕಾರ್ಖಾನೆಯಲ್ಲಿ ಇರಬೇಕಾದ ಪರಿಸ್ಥಿತಿ ಇದ್ದ ಕಾರಣ, ಅವರ ಮಕ್ಕಳಿಗಾಗಿ 'ರಾಬರ್ಟ್ ಓವನ್' ೧೮೧೬ರಲ್ಲಿ ಸ್ಕಾಟ್ಲೆಂಡಿನ ನ್ಯೂಲಾನಾರ್ಕ್ ಎಂಬಲ್ಲಿ ಮೊಟ್ಟ ಮೊದಲ ಕಿಂಡರ್ ಗಾರ್ಟನ್ ಆರಂಭಿಸಿದನು.

ಅಲ್ಲಿ ಆತ ಮಕ್ಕಳು ಸ್ವತಂತ್ರವಾಗಿ ಓಡಾಡಿಕೊಂಡು, ಮನೆಯ ವಾತಾವರಣದಲ್ಲಿ ಬೆಳೆಯುವಂತಹ ಅವಕಾಶ ಮಾಡಿಕೊಟ್ಟಿದ್ದ. ಬಳಿಕ ಮಕ್ಕಳ ಜ್ಞಾಪಕಶಕ್ತಿ ಮತ್ತು ನೈತಿಕ ಮಟ್ಟ ವೃದ್ಧಿಗೆ ಉಪಯುಕ್ತ ಅಭ್ಯಾಸ ಆರಂಭಿಸಿದ. ೧೮೩೬ರಲ್ಲಿ ಸ್ವಿಟ್ಜರ್‌ಲೆಂಡ್‌ನ ಪೆಸ್ಟಾಲೊಜಿ ಅಭಿವೃದ್ಧಿಪಡಿಸಿದ ವಿಧಾನದ ಪ್ರಕಾರ ಕಿಂಡರ್ ಗಾರ್ಟನ್‌ನಲ್ಲಿ ಕೆಲಸ ಮಾಡುವ ಶಿಕ್ಷಕರಿಗೆ ವಿಶಿಷ್ಟ ತರಬೇತಿ ನೀಡುವ ಸೊಸೈಟಿ ಆರಂಭವಾಯಿತು.

೧೮೩೭ರಲ್ಲಿ ಫ್ರೊವೆಲ್, ಜರ್ಮನಿಯ ಬ್ಲಾಂಕೆನ್ ಬಾರ್ಗ್‌ನಲ್ಲಿ ಮಕ್ಕಳಿಗೆ ಆಟಗಳ ಮೂಲಕ ಮಾನಸಿಕ ತರಬೇತಿ ನೀಡುವ ಶಾಲೆ ಆರಂಭಿಸಿದ. ಅದಕ್ಕೆ ಅವನು ಕಿಂಡರ್ ಗಾರ್ಟನ್ ಎಂಬ ಹೆಸರು ನೀಡಿದ. ಅಲ್ಲಿ ಮಕ್ಕಳ ಸ್ವತಂತ್ರ ಬೆಳವಣಿಗೆಗೆ ಹೆಚ್ಚು ಒತ್ತು ನೀಡಲಾಗಿತ್ತು. ಅವು ನಿಧಾನವಾಗಿ ಯುರೋಪ್ ದೇಶಗಳಲ್ಲಿ ಹಬ್ಬಿದವು. ಇದೀಗ ಭಾರತದಲ್ಲೂ ಜನಪ್ರಿಯವಾಗಿವೆ. ತಿಂಗಳ ಮಕ್ಕಳಾದಿಯಾಗಿ ಮೂರು ವರ್ಷದ ಮಕ್ಕಳನ್ನು ನೋಡಿಕೊಳ್ಳುವ ಕಿಂಡರ್ ಗಾರ್ಟನ್‌ಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿವೆ.

ಅಂಗನವಾಡಿ ಅಥವಾ ಬಾಲವಾಡಿ ಅಥವಾ ಕಿಂಡರ್‌ಗಾರ್ಟನ್ ಎಂಬ ಹೆಸರಿನಿಂದ ಕರೆಯಲ್ಪಡುವ ಈ ಕೇಂದ್ರವು ವಿಶೇಷವಾದುದಾಗಿದೆ. ಕಿಂಡರಗಾರ್ಟನ್ ಎಂಬ ಜರ್ಮನ್ ಶಬ್ದಕ್ಕೆ ಮಕ್ಕಳ ತೋಟ ಎಂದು ಅರ್ಥ. ಶಾಲೆಯೇ ತೋಟ, ಮಕ್ಕಳೇ ಅದರಲ್ಲಿ ಬೆಳೆಯುವ ಸಸಿಗಳು. ಉಪಾಧ್ಯಾಯನೇ ತೋಟಗಾರನು ಎಂದು ಜರ್ಮನಿಯ ಫ್ರೊವೆಲ್ (೧೭೮೨-೧೮೫೨) ಅವರು ಕಲ್ಪಿಸಿ ಈ ವಿಶೇಷವಾದ ಹೆಸರನ್ನು ಸಣ್ಣ ಮಕ್ಕಳ ಶಾಲೆಗಳಿಗೆ ಕೊಟ್ಟಿದ್ದಾನೆ. ಮಕ್ಕಳನ್ನು ಬೀಜ, ಮೊಳಕೆ, ಸಸಿಗಳಿಗೆ ಹೋಲಿಸಿ, ಇವುಗಳ ಉತ್ತಮ ಬೆಳವಣಿಗೆಗೆ ಆಶ್ರಯವಾದ ನೆಲವನ್ನು ಹದಗೊಳಿಸಿ ಬಿಸಿಲು, ಗಾಳಿ, ನೀರು ಚೆನ್ನಾಗಿ ಸಸಿಗಳಿಗೆ ಸಿಗುವಂತೆ ಏರ್ಪಡಿಸಿ ಅವಕ್ಕೆ ಸರಿಯಾದ ಗೊಬ್ಬರವನ್ನಿಟ್ಟರೆ ಮುಂದೆ ಆ ಸಸಿಗಳು ಹುಲುಸಾಗಿ ಬೆಳೆದು ಒಳ್ಳೆಯ ಹೂವಿನ ಫಸಲನ್ನು ಕೊಡುತ್ತವೆ. ಹಾಗೆಯೇ ಮಕ್ಕಳಲ್ಲಿ ಸ್ವಾಭಾವಿಕವಾದ ಶಕ್ತಿಗಳಿಗೆ ತಕ್ಕ ವ್ಯವಸಾಯ ಮಾಡಿ ಅವು ಸ್ಫೂರ್ತಿಗೆ ಬರುವಂತೆ ಮಾಡಿದರೆ ಮಾತ್ರ ಮುಂದೆ ಅವು ತಾವಾಗಿಯೇ ಜ್ಞಾನಾರ್ಜನೆ ಮಾಡಲು ಶಕ್ತರಾಗುವವು ಎಂಬುದು ಫ್ರೊವೆಲ್‌ನ ಅಭಿಮತವಾಗಿರುತ್ತದೆ. ಈ ಅಭಿಮತಕ್ಕನುಸಾರವಾಗಿ ಶಿಕ್ಷಣ ಒದಗಿಸುವ ಶಾಲೆಗಳಿಗೂ ಮುಂದೆ ಅಲ್ಲಿ ಕಲಿಸುವ ಕ್ರಮಕ್ಕೂ "ಕಿಂಡರ್ ಗಾರ್ಟನ್" ಎಂಬ ಹೆಸರು ಬಂದಿರುತ್ತದೆ. ಇವುಗಳನ್ನು ಭಾರತದಲ್ಲಿ ಅಂಗನವಾಡಿ ಅಥವಾ ಬಾಲವಾಡಿಗಳೆಂದು ಕರೆಯಲಾಗುತ್ತಿದೆ.

ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು. ಮಕ್ಕಳ ಭವಿಷ್ಯವನ್ನು ರೂಪಿಸುವಲ್ಲಿ ತಂದೆ ತಾಯಿ ಹಾಗೂ ಶಿಕ್ಷಕರು ಎಷ್ಟು ಪ್ರಮುಖ ಪಾತ್ರ ವಹಿಸುತ್ತಾರೋ ಅಷ್ಟೇ ಪ್ರಮುಖ ಪಾತ್ರ ಅಂಗನವಾಡಿ ಕಾರ್ಯಕರ್ತೆಯರು ವಹಿಸುತ್ತಾರೆ.

ಇದು ಕೇಂದ್ರ ಸರಕಾರದ ಯೋಜನೆಯಾಗಿದೆ. ಈ ಯೋಜನೆಯನ್ನು ಪ್ರಪ್ರಥಮವಾಗಿ ಕೇರಳದಲ್ಲಿ ೧೯೭೫ ಅಕ್ಟೋಬರ್ ೨ ರಂದು ಪ್ರಾರಂಭಿಸಲಾಯಿತು. ಕೇರಳದಲ್ಲಿ ಸ್ವಲ್ಪ ಮಟ್ಟಿಗೆ ಈ ಯೋಜನೆ

ಯಶಸ್ವಿಯಾಯಿತು. ಈ ಕಾರ್ಯಕ್ರಮ ಯಾವ ರೀತಿಯಾಗಿ ಯೋಜನೆಯನ್ನು ಹಾಕಿಕೊಂಡು ಕಾರ್ಯಕ್ರಮ ರೂಪಿಸಿದ್ದಾರೆ ಎಂದು ತಿಳಿದುಕೊಳ್ಳಲು ಕರ್ನಾಟಕದಿಂದ ಸಂಬಂಧಪಟ್ಟ ಅಧಿಕಾರಿಗಳು ಮತ್ತು ಪ್ರಮುಖ ಕಾರ್ಯಕರ್ತೆಯರು ಕೇರಳ ರಾಜ್ಯಕ್ಕೆ ಭೇಟಿ ನೀಡಿದ್ದರು. ಅಲ್ಲಿ ಯೋಜನೆ ಮತ್ತು ಕಾರ್ಯಕ್ರಮಗಳನ್ನು ತಿಳಿದುಕೊಂಡು ಬಂದು ಕರ್ನಾಟಕದಲ್ಲಿ ಅಂಗನವಾಡಿ ಯೋಜನೆ ಮತ್ತು ಕಾರ್ಯಕ್ರಮವನ್ನು ರೂಪಿಸಿದರು.

ಅಂಗಳದಲ್ಲಿ ಆಡುವ ಮಗುವನ್ನು ತೆಗೆದುಕೊಂಡು ಮಗುವಿಗೆ ದೈಹಿಕ, ಭಾವನಾತ್ಮಕ, ಸಾಮಾಜಿಕ, ಬೌದ್ಧಿಕ ಹಾಗೂ ಭಾಷಾ ಜ್ಞಾನ ನೀಡುವುದೇ ಅಂಗನವಾಡಿ ಎಂದು ಕರೆದರು.

ಕೇಂದ್ರ ಪುರಸ್ಕೃತ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯನ್ನು ಕರ್ನಾಟಕ ರಾಜ್ಯದಲ್ಲಿ ೧೯೭೫ ಅಕ್ಟೋಬರ್ ೨ರಂದು ಮೈಸೂರು ಜಿಲ್ಲೆಯ ಟಿ.ನರಸಿಪುರ ತಾಲ್ಲೂಕಿನಲ್ಲಿ ೧೦೦ ಅಂಗನವಾಡಿ ಕೇಂದ್ರಗಳೊಂದಿಗೆ ಮೊಟ್ಟ ಮೊದಲಿಗೆ ಪ್ರಾರಂಭಿಸಲಾಯಿತು. ಇದು ಹಂತಹಂತವಾಗಿ ವಿಸ್ತರಣೆಗೊಂಡು ರಾಜ್ಯದಲ್ಲಿ ಪ್ರಸ್ತುತ ೧೮೫ ಸಮಗ್ರ ಶಿಶು ಅಭಿವೃದ್ಧಿ ಯೋಜನೆಗಳಲ್ಲಿ ೬೦೦೮೬ ಅಂಗನವಾಡಿ ಕೇಂದ್ರಗಳು ಹಾಗೂ ೩೩೩೧ ಮಿನಿ ಅಂಗನವಾಡಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿವೆ.

ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಮಕ್ಕಳ ಸರ್ವತೋಮುಖ ಅಭಿವೃದ್ಧಿಗಾಗಿ ೩ರಿಂದ ೬ ವರ್ಷದ ಮಕ್ಕಳಿಗೆ ಅನೌಪಚಾರಿಕ ಶಾಲಾಪೂರ್ವ ಶಿಕ್ಷಣವನ್ನು ನೀಡಲಾಗಿದೆ. ಶಾಲಾಪೂರ್ವ ಶಿಕ್ಷಣವನ್ನು ಸಾಂಪ್ರದಾಯಿಕ ರೀತಿಯಲ್ಲಿ ೧೯೭೫-೧೯೮೬ರವರೆಗೆ ಮಕ್ಕಳಿಗೆ ಕಲಿಸಲಾಗುತ್ತಿತ್ತು. ನಂತರ ಕಾರ್ಯಕರ್ತೆಯರಲ್ಲಿ ಪ್ರೇರಣೆ ಉಂಟುಮಾಡಲು ಹಾಗೂ ಮಕ್ಕಳ ಗ್ರಹಣಶಕ್ತಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಆಶಾಖಾನ ಫೌಂಡೇಷನ್ ಇವರ ಸಹಕಾರದೊಂದಿಗೆ ಶ್ರೀಮತಿ ಇಂದಿರಾ ಸ್ವಾಮಿನಾಥನ್ ಅವರು ಕಾಪ್ಸಿ (ಗ್ರಹಣಶಕ್ತಿ ಆಧಾರಿತ ಶಾಲಾಪೂರ್ವ ಶಿಕ್ಷಣ) ಪದ್ಧತಿ ತರಬೇತಿಯನ್ನು ಎಲ್ಲ ವಿಭಾಗದ ಮಟ್ಟದಲ್ಲಿ ಶಿಶು ಅಭಿವೃದ್ಧಿಯನ್ನು ಹಾಗೂ ಬೆಳವಣಿಗೆಯನ್ನು ಮಾಡುವಲ್ಲಿ ಶ್ರಮಿಸುತ್ತಿದ್ದವು. ನಂತರ ಯೋಜನಾ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ತರಬೇತಿಯನ್ನು ನೀಡಿದರು. ಇದರ ಮೂಲಕ ಶಾಲಾಪೂರ್ವ ಶಿಕ್ಷಣಕ್ಕೆ ಒಂದು ನಿರ್ದಿಷ್ಟ ಚೌಕಟ್ಟನ್ನು ನೀಡಲಾಯಿತು. ೧೯೮೬ರಿಂದ ೧೯೯೦ರವಗೆ ಕಾಪ್ಸಿ ಪದ್ಧತಿಯಲ್ಲಿ ಶಾಲಾಪೂರ್ವ ಶಿಕ್ಷಣವನ್ನು ಅಂಗನವಾಡಿ ಕೇಂದ್ರಗಳಲ್ಲಿ ನೀಡಲಾಗುತ್ತಿತ್ತು.

ಆದರೆ ಈ ಕಾಪ್ಸಿ ಪದ್ಧತಿಯಲ್ಲಿ ಗ್ರಹಣಶಕ್ತಿಗೆ ಹೆಚ್ಚು ಒತ್ತನ್ನು ನೀಡಲಾಗಿತ್ತು. ಆದರೆ ಇತರೆ ಬೆಳವಣಿಗೆಗಳ ಬಗ್ಗೆ ಹೆಚ್ಚು ಪ್ರಾಮುಖ್ಯತೆ ಇರದ ಕಾರಣ ಇಡೀ ರಾಜ್ಯದಲ್ಲಿ ಏಕಪ್ರಕಾರದ ವೇಳಾಪಟ್ಟಿ ಇರಲಿಲ್ಲ. ಹಾಗಾಗಿ ಶಾಲಾಪೂರ್ವ ಶಿಕ್ಷಣ ಚಟುವಟಿಕೆಗಳನ್ನು ಅಂಗನವಾಡಿ ಕೇಂದ್ರಗಳಲ್ಲಿ ನೀಡುವ ದೃಷ್ಟಿಯಿಂದ ಶಾಲಾಪೂರ್ವ ಶಿಕ್ಷಣದಲ್ಲಿ ಸಮಗ್ರ ಬದಲಾವಣೆ ತರಲು ಶಿಶು ಅಭಿವೃದ್ಧಿ ಯೋಜನೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಎಲ್ಲ ಸ್ಥಳಗಳ ಕ್ಷೇತ್ರ ಸಿಬ್ಬಂದಿಯನ್ನು ಒಳಗೊಂಡು ರಾಜ್ಯಮಟ್ಟದ ಕಾರ್ಯಾಗಾರವನ್ನು ನಡೆಸಲಾಯಿತು.

ನಂತರ ಇದನ್ನು ಪರಿಶೀಲಿಸಲು ೧೯೯೦ರಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಇತರೆ ರಾಜ್ಯಗಳಲ್ಲಿ ಶಿಶು ಅಭಿವೃದ್ಧಿ ಯೋಜನೆಯಡಿ ಶಾಲಾಪೂರ್ವ ಶಿಕ್ಷಣದಲ್ಲಿ ಅಳವಡಿಸಿಕೊಂಡಿರುವ ಪದ್ಧತಿಗಳನ್ನು ಅಧ್ಯಯನ ಮಾಡಲು, ಸದರಿ ಸಮಿತಿಯು ಗುಜರಾತ್ ಹಾಗೂ ಕೇರಳ ರಾಜ್ಯಗಳಿಗೆ ಭೇಟಿ ನೀಡಿತು. ಮುಖ್ಯವಾಗಿ ಕೇರಳ ರಾಜ್ಯದಲ್ಲಿ ಅಳವಡಿಸಿಕೊಂಡಿರುವ ವಿಷಯ ಆಧಾರಿತ ಪದ್ಧತಿಯ ಬಗ್ಗೆ ದೀರ್ಘಾವಧಿ ಅಧ್ಯಯನ ನಡೆಸಿ ರಾಜ್ಯಮಟ್ಟದಲ್ಲಿ ಕಾರ್ಯಾಗಾರವನ್ನು ನಡೆಸಿ ವರದಿಯನ್ನು ಮಂಡಿಸಲಾಯಿತು. ಶಾಲಾಪೂರ್ವ ಶಿಕ್ಷಣದ ಕಿಂಡರ ಗಾರ್ಟನ್, ಮಾಂಟೆಸ್ಸೋರಿ ಪದ್ಧತಿ ಹಾಗೂ ವಿಷಯ ಆಧಾರಿತ ಪದ್ಧತಿಗಳಲ್ಲಿ ಬರುವ ಉತ್ತಮ ಅಂಶಗಳನ್ನು ತೆಗೆದುಕೊಂಡು ಅದರ ಆಧಾರದ ಮೇಲೆ ೪೨ ವಿಷಯಗಳನ್ನು ೫೨ ವಾರಗಳಲ್ಲಿ ಮಕ್ಕಳಿಗೆ ಪರಿಚಯಿಸಲು ತೀರ್ಮಾನಿಸಿ ಸಮಗ್ರ ಶಾಲಾಪೂರ್ವ ಶಿಕ್ಷಣ ಪದ್ಧತಿಯಡಿ ವೇಳಾಪಟ್ಟಿಯನ್ನು ಸಿದ್ಧಪಡಿಸಲಾಯಿತು. ಈ ೪೨ ವಿಷಯಗಳಿಗೆ ಬೇಕಾದ ಕಥೆ, ಹಾಡು, ಆಟ, ಚಟುವಟಿಕೆಗಳ ಪಟ್ಟಿಯನ್ನು ಸಿದ್ಧಪಡಿಸಲಾಯಿತು. ಇಡೀ ರಾಜ್ಯಾದ್ಯಂತ ಏಕರೂಪದ ಶಾಲಾಪೂರ್ವ ಶಿಕ್ಷಣದ ವೇಳಾಪಟ್ಟಿಯನ್ನು ಅಳವಡಿಸಿಕೊಂಡು, ಎಲ್ಲ ಕ್ಷೇತ್ರ ಸಿಬ್ಬಂದಿವರ್ಗದವರಿಗೆ ರಾಜ್ಯಾದ್ಯಂತ ತರಬೇತಿಯನ್ನು ನೀಡಿ ಸಜ್ಜುಗೊಳಿಸಲಾಯಿತು.

ಅಂಗನವಾಡಿ ಕಾರ್ಯಕರ್ತೆಯರು ೪೨ ವಿಷಯಗಳನ್ನು ವಾರಕ್ಕೊಂದು ವಿಷಯದಂತೆ ಒಂದು ವಿಷಯವನ್ನು ಪ್ರಧಾನವಾಗಿ ಇಟ್ಟುಕೊಂಡು ಒಂದು ವಾರದ ಕಾಲ ಮಗುವಿನ ಸರ್ವತೋಮುಖ ಬೆಳವಣಿಗೆಗೆ ಸಹಾಯಕವಾಗುವ ಚಟುವಟಿಕೆಗಳನ್ನು ವೇಳಾಪಟ್ಟಿಗೆ ಅನುಗುಣವಾಗಿ ನಡೆಸಲು ಸೂಚಿಸಲಾಯಿತು.

. ಆದರೆ, ಇದರ ಬಗ್ಗೆ ಯಾವುದೇ ತರಬೇತಿ ನೀಡದ ಹಾಗೂ ಕೈಪಿಡಿಗಳಿಲ್ಲದ ಕಾರಣ ಅಂಗನವಾಡಿ ಕಾರ್ಯಕರ್ತೆಯರು ಈ ಕಾರ್ಯವನ್ನು ಅನುಷ್ಠಾನಗೊಳಿಸಲು ಹಾಗೂ ಯಶಸ್ವಿಗಳಿಸಲು ಸಾಧ್ಯವಾಗಲಿಲ್ಲ. ಎಲ್ಲ ಅಂಗನವಾಡಿ ಕಾರ್ಯಕರ್ತೆಯರು ಆಸಕ್ತಿಯಿಂದ ಶಾಲಾಪೂರ್ವ ಶಿಕ್ಷಣವನ್ನು ಕಲಿಸಲು ಸಹಾಯವಾಗಲೆಂದು ೨೦೦೨-೦೪ರಲ್ಲಿ ಡಿ.ಎಸ್.ಇ.ಆರ್.ಟಿ. (D.S.E.R.T) ಬೆಂಗಳೂರು ಯುನಿಸೆಫ್ ಸಹಯೋಗದೊಂದಿಗೆ ೪೨ ವಿಷಯಗಳಿಗೆ ಸಂಬಂಧಿಸಿದಂತೆ ಕಥೆ, ಹಾಡು, ಆಟಗಳು, ಕ್ರಿಯಾತ್ಮಕ ಚಟುವಟಿಕೆಗಳು, ಬೌದ್ಧಿಕ(ಗ್ರಹಣಶಕ್ತಿ) ಚಟುವಟಿಕೆಗಳನ್ನು ಸಂಗ್ರಹಿಸಿ ಚಿಲಿಪಿಲಿ ಎಂಬ ಆರು ಶಾಲಾಪೂರ್ವ ಶಿಕ್ಷಣ ಕೈಪಿಡಿಗಳನ್ನು ಸಿದ್ಧಪಡಿಸಿತು. ಇವುಗಳನ್ನು ಎಲ್ಲ ಅಂಗನವಾಡಿ ಕೇಂದ್ರಗಳಿಗೆ ಈ ಆರು ಕೈಪಿಡಿಗಳನ್ನು ನೀಡಲಾಯಿತು. ಆದರೆ, ಅಂಗನವಾಡಿ ಕಾರ್ಯಕರ್ತೆಯರಿಗೆ ಈ ಕೈಪಿಡಿಯನ್ನು ಉಪಯೋಗಿಸುವ ಬಗ್ಗೆ ಯಾವುದೇ ತರಬೇತಿ ನೀಡದ ಕಾರಣ ಆಸಕ್ತಿ ಹೊಂದಿರದ ಅಂಗನವಾಡಿ ಕಾರ್ಯಕರ್ತೆಯರು ಸದರಿ ಕೈಪಿಡಿಯನ್ನು ಉಪಯೋಗಿಸುವಲ್ಲಿ ವಿಫಲವಾದುದನ್ನು ಮನಗಂಡು ಇದರ ಬಗ್ಗೆ ಎಲ್ಲ ಅಂಗನವಾಡಿ ಕಾರ್ಯಕರ್ತೆಯರಿಗೆ ೩ ದಿನದ ತರಬೇತಿಯನ್ನು ನೀಡಲು ತೀರ್ಮಾನಿಸಿ

ತರಬೇತಿ ವಿನ್ಯಾಸ ಹಾಗೂ ತರಬೇತಿ ಕೈಪಿಡಿ ಸಿದ್ಧಪಡಿಸಲು ರಾಜ್ಯಮಟ್ಟದ ಸಮಿತಿಯನ್ನು ರಚಿಸಿದರು. ಈ ಸಮಿತಿ D.S.E.R.T ಬೆಂಗಳೂರು ಇಲ್ಲಿ ೩ ದಿನ ಕಾರ್ಯಾಗಾರವನ್ನು ನಡೆಸಿ ತರಬೇತಿ, ವಿನ್ಯಾಸ ಹಾಗೂ ತರಬೇತಿದಾರರ ಕೈಪಿಡಿಯನ್ನು ಸಿದ್ಧಪಡಿಸಿತು.

### ೧.೩. ಅಧ್ಯಯನದ ಕ್ಷೇತ್ರ ಪರಿಚಯ

ಅಂಗನವಾಡಿ ಕಾರ್ಯಕರ್ತೆಯರ ಸಾಮಾಜಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಗುಲಬರ್ಗಾ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಗುಲಬರ್ಗಾ ಜಿಲ್ಲೆಯನ್ನು ಪರಿಚಯಿಸುವುದು ಸೂಕ್ತವೆನಿಸುತ್ತದೆ.

ಇಡೀ ಕರ್ನಾಟಕದಲ್ಲಿಯೇ ಅತ್ಯಂತ ದೊಡ್ಡ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಗುಲಬರ್ಗಾ ಜಿಲ್ಲೆ ಕರ್ನಾಟಕದ ಉತ್ತರ ಭಾಗದಲ್ಲಿದೆ. ೧೯೫೬ರಲ್ಲಿ ರಾಜ್ಯ ಪುನರ್ವಿಂಗಡಣೆಯಾದಾಗ ಹೈದ್ರಾಬಾದ್ ಕರ್ನಾಟಕ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಕ್ಕೆ ಬೀದರ್ ಮತ್ತು ರಾಯಚೂರು ಜಿಲ್ಲೆಗಳೊಂದಿಗೆ ಸೇರ್ಪಡೆಯಾಯಿತು. ಉತ್ತರದಲ್ಲಿ ಬೀದರ್ ಮತ್ತು ಮಹಾರಾಷ್ಟ್ರ ಉಸ್ಮಾನಾಬಾದ್ ಜಿಲ್ಲೆ, ಪೂರ್ವದಲ್ಲಿ ಆಂಧ್ರಪ್ರದೇಶದ ಮೇಡಕ್ ಮತ್ತು ಮಹಬೂಬ್‌ನಗರ ಜಿಲ್ಲೆಗಳು, ದಕ್ಷಿಣದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಬಿಜಾಪುರ ಮತ್ತು ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆ, ಇವು ಗುಲಬರ್ಗಾ ಜಿಲ್ಲೆಯನ್ನು ಸುತ್ತುವರಿದಿವೆ.

ಈ ಜಿಲ್ಲೆಗೆ ಮೊದಲು ಕಲಬುರ್ಗಿ ಎಂದು ಕರೆಯುತ್ತಿದ್ದರು. ಕಲ್ಲು ಪಂಬರಿಕೆ ಅಂದರೆ ಕಲ್ಲಿನ ಪದರುಗಳ ಪ್ರದೇಶವೆಂಬ ಅರ್ಥ ಹೊಂದಿದೆ. ಈ ಹೆಸರು ಮುಂದೆ ಕಲಬುರ್ಗಿಯಾಗಿ ರೂಪುಗೊಂಡಿದೆ. ನಂತರ ಬಹಮನಿ ಅರಸರ ಕಾಲದಲ್ಲಿ ಗುಲಬರ್ಗಾ ಎಂದು ಕರೆಯಲ್ಪಟ್ಟಿತು. "ಗುಲ್" ಎಂದರೆ ಹೂವು "ಬರ್ಗ" ಎಂದರೆ "ಎಲೆ" ಎಂದು ಅರ್ಥವಿದೆ. ಪರ್ಶಿಯನ್ ಭಾಷೆಯ ಈ ಹೆಸರು ಹೂವು ಎಲೆಗಳ ಸುಂದರ ಪ್ರದೇಶ ಎಂಬ ಅರ್ಥವನ್ನು ನೀಡುತ್ತದೆ. ಅಂದರೆ ಕಲಬುರ್ಗಿ ಸುಂದರ ಉದ್ಯಾನ ನಗರಿಯೆಂದು ಕರೆಯಲ್ಪಡುತ್ತಿತ್ತು. ಇಂದು ಗುಲಬರ್ಗಾ ಎಂದು ಜನಪ್ರಿಯವಾಗಿದೆ. ಹಿರಿಯರು ಇಂದಿಗೂ ಕೂಡ ಕಲಬುರ್ಗಿ ಎಂದು ಕರೆಯುತ್ತಾರೆ. ಈ ಜಿಲ್ಲೆ ೧೬.೨೪೨ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಗುಲಬರ್ಗಾ ಜಿಲ್ಲೆ ೨೫.೮೩.೧೪೭ಕ್ಕಿಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ. ಅಂದರೆ ೧೩.೧೧.೬೭ಲಕ್ಕಿಂತ ಹೆಚ್ಚು ಪುರುಷರಿದ್ದಾರೆ. ೧೨.೭೨.೨೩೭ರಷ್ಟು ಸ್ತ್ರೀಯರಿದ್ದಾರೆ. ಗುಲಬರ್ಗಾ, ಜಿಲ್ಲೆಯು ಚಿತ್ತಾಪುರ, ಅಫಜಲ್‌ಪುರ, ಆಳಂದ, ಯಾದಗಿರಿ, ಚಿಂಚೋಳಿ, ಸೇಡಂ, ಜೇವರ್ಗಿ, ಶಹಾಪೂರ, ಸುರಪುರ ಎಂಬ ೯ ತಾಲ್ಲೂಕುಗಳನ್ನು ಹೊಂದಿರುವ ಈ ಜಿಲ್ಲೆಗೆ ಇತ್ತೀಚೆಗೆ ಹುಣಸಿಗಿ, ವಡಗೇರು, ಯಡ್ರಾಮ, ಕಳಗಿ ಎಂಬ ಹೊಸ ತಾಲ್ಲೂಕುಗಳು ರಚನೆಯಾಗಿವೆ. ಅಲ್ಲದೆ ಆಡಳಿತ, ಅನುಕೂಲಕ್ಕಾಗಿ ಗುಲಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರಿ ಜಿಲ್ಲೆಯೆಂದು ಘೋಷಿಸಿಲಾಗಿದೆ. ನವೆಂಬರ್ ೧ ರಾಜ್ಯೋತ್ಸವ ದಿನದಂದು ಅಧಿಕೃತವಾಗಿ ಘೋಷಣೆ ಮಾಡಲಾಗಿದೆ.

ಪ್ರಾಕೃತಿಕ ಭೂಸಂಪತ್ತು, ಖನಿಜ ಸಂಪತ್ತು, ಸಾಹಿತ್ಯ, ಸಂಗೀತ, ಲಲಿತಕಲೆ ಜೊತೆಗೆ ಧಾರ್ಮಿಕ ನೆಲೆ ಮತ್ತು ಐತಿಹಾಸಿಕ ಪರಂಪರೆ ಈ ಜಿಲ್ಲೆಗಿದೆ. ಇಲ್ಲಿ ಅರ್ಥಪೂರ್ಣವಾದ ಸಾಂಸ್ಕೃತಿಕ ಸಂಪನ್ನ ಸ್ಥಿತಿಯಿದೆ. ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಕಳಚೂರ್ಯರು, ಸೇವುಣರು ರಾಜ್ಯವಾಳಿದ ಈ ಪ್ರದೇಶದಲ್ಲಿ ಬಹಮನೀ ಅರಸರು, ಆದಿಲ್‌ಶಾಹಿ ಅರಸರು ಆಳ್ವಿಕೆ ನಡೆಸಿದ ನಂತರ ಹೈದ್ರಾಬಾದ್ ನಿಜಾಮರು ಆಳಿದ್ದಾರೆ. ಹೀಗಾಗಿ ಈ ಪ್ರದೇಶವು ಹಲವಾರು ಧರ್ಮಗಳ ಅರಸರ ಆಳ್ವಿಕೆಗೆ ಒಳಗಾಗಿದ್ದರಿಂದ ಇಲ್ಲಿಯ ಧರ್ಮ, ಸಂಸ್ಕೃತಿ ಹಾಗೂ ಸಾಹಿತ್ಯ ಕ್ಷೇತ್ರಗಳ ಅನ್ಯ ಸಂಸ್ಕೃತಿ ಹಾಗೂ ಧರ್ಮಗಳ ಪ್ರಭಾವಕ್ಕೆ ಒಳಗಾಗಿ ತನ್ನದೇ ಆದ ವೈಶಿಷ್ಟ್ಯಗಳನ್ನು ಮೂಡಿಸಿಕೊಂಡಿದೆ.

**ಸಾಮಾಜಿಕ ಜೀವನ**

ಗುಲಬರ್ಗಾ ಜಿಲ್ಲೆ ಸಾಮಾಜಿಕ, ಆರ್ಥಿಕ, ರಾಜಕೀಯ, ದೃಷ್ಟಿಯಿಂದ ಹಿಂದುಳಿದ ಪ್ರದೇಶವಾಗಿದೆ, ಒಂದು ಭಾಗದ ಸಾಮಾಜಿಕ, ಜೀವನ ತಿಳಿದುಕೊಳ್ಳಬೇಕಾದರೆ ಅಲ್ಲಿನ ಕೌಟುಂಬಿಕ ವೈವಾಹಿಕ, ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ಜೀವನದ ಚಿಂತನೆ ಮಾಡಬೇಕಾಗುತ್ತದೆ.

ಅವಿಭಕ್ತ ಕುಟುಂಬ ಈ ಭಾಗದ ಜನಜೀವನದ ಮಹತ್ವ ಲಕ್ಷಣವಾಗಿದೆ. ಪಿತೃಪ್ರಧಾನ ಕುಟುಂಬಗಳು ಹೆಚ್ಚು ಕಂಡುಬರುತ್ತವೆ. ಈ ಕುಟುಂಬಗಳು ಸಾಂಸ್ಕೃತಿಕವಾಗಿ ಬಂದ ಸಂಪ್ರದಾಯಗಳನ್ನು ಮುಂದುವರೆಸಿಕೊಂಡು ಹೋಗುವುದರಲ್ಲಿ ಮಹತ್ವದ ಪಾತ್ರ ವಹಿಸಿವೆ. ಹಲವು ಜಾತಿ ಸಮೂಹಗಳು, ವಿಭಿನ್ನ ಜಾತಿಗಳಲ್ಲಿ ಅನೇಕ ಸಾಂಪ್ರದಾಯಿಕ ಆಚರಣೆಗಳು, ಮಠ, ಮಸೀದಿ ಗುಡಿಗುಂಡಾರಗಳ ವಿಭಿನ್ನ ಆಚರಣೆಗಳು, ನಂಬಿಕೆ, ಕೋಮು ಸೌಹಾರ್ದತೆ, ಧಾರ್ಮಿಕ ಸಹಿಷ್ಣುತಾ ಭಾವನೆ ಮುಂತಾದ ವಿಶಿಷ್ಟ ಅಂಶಗಳನ್ನು ಇಲ್ಲಿ ಕಾಣಬಹುದಾಗಿದೆ.

**ಭೂ ಸಂಪತ್ತು**

ವಿಶ್ವದಲ್ಲಿಯೇ ಪ್ರಸಿದ್ಧ ತೊಗರಿ ಕಣಜ, ಜೋಳ, ಭತ್ತ ಸಜ್ಜೆ, ಹುರುಳಿ, ಅವರೆ, ಕಬ್ಬು, ಮೆಣಸಿನಕಾಯಿ, ಹತ್ತಿ, ಗೋದಿ ಇಂದು ಸಮೃದ್ಧವಾಗಿ ಬೆಳೆಯುತ್ತಾರೆ. ತಂಬಾಕು, ಕಡಲೆ ಶೇಂಗಾ, ಅಗಸೆ, ಕುಸುಬಿ ಎಣ್ಣೆ ಬೆಳೆಗಳು ಜಿಲ್ಲೆಯ ಮುಖ್ಯ ಬೆಳೆಗಳಾಗಿವೆ.

**ಜಿಲ್ಲೆಯ ಮುಖ್ಯನದಿಗಳು**

ಕೃಷ್ಣಾ ಮತ್ತು ಭೀಮಾ, ಕಾಗಿಣಾ, ಮುಲ್ಲಾಮರಿ, ಅಮರ್ಜಾ ಕಲಾವತಿ, ಬೆಣ್ಣೆ ತೋರಾ ಮತ್ತು ಗಂಡೋರಿ ಈ ಜಿಲ್ಲೆಯ ಪ್ರಮುಖ ನದಿಗಳಾಗಿವೆ. ರೈತರಿಗೆ ಅನ್ನದ ಜೀವ ನದಿಯಾಗಿವೆ.

**ಭೂಗರ್ಭ ಸಂಪತ್ತು**

ವಿಶ್ವವಿಖ್ಯಾತ ಸಿಮೆಂಟ್ ಕಾರ್ಖಾನೆಗಳು ಬಬ್ಲು ಶಹಾಬಾದ ಕಲ್ಲುಗಳು ಇತ್ತೀಚೆಗೆ ಮೊಸಾಯಿಕ್ ನೆಲಹಾಸು ನಾಚಿಸುವಂತಹ ಸೇಡಂದಲ್ಲಿ ಸಿಗುವ ಪಿಂಕ್ ಚೀಟಾ ಕಲ್ಲುಗಳು ಪುಲ್ಲದ ಅರ್ತ ಎಂದು ಹೇಳಿಕೊಳ್ಳುವ ಪೆಟ್ರೋಲಿಯಂ ಶುದ್ಧಗೊಳಿಸುವ ಸವಳು ಮಣ್ಣು, ಗ್ರಾನೈಟ್ ಕಲ್ಲು ಮುಂದಿನ

ಭವಿಷ್ಯದ ಆಶಾಕಿರಣವಾಗಿರುವ ಶಹಾಪುರ ತಾಲ್ಲೂಕಿನ ಗೋಗಿಯಲ್ಲಿ ದೊರೆತಿರುವ ಯುರೇನಿಯಂ ನಿಕ್ಷೇಪ ಗುಲಬರ್ಗಾ ಜಿಲ್ಲೆಯ ಸಂಪತ್ತಾಗಿದೆ.

### ಧಾರ್ಮಿಕ ಸಹಿಷ್ಣುತೆಯ ತಳಹದಿ

ಗುಲಬರ್ಗಾ ಜಿಲ್ಲೆಯು ಕೋಮು ಸೌಹಾರ್ದತೆಗೆ ಹೆಸರುವಾಸಿಯಾಗಿದೆ. ನಗರದಲ್ಲಿರುವ ಶ್ರೀ ಶರಣಬಸವೇಶ್ವರ ಮಂದಿರ ಹಾಗೂ ಖಾಜಾ ಬಂದೇನವಾಜ ದರ್ಗಾ ಇವೆರಡು ಗುಲಬರ್ಗಾ ಜಿಲ್ಲೆಯ ಎರಡು ಶಿಖರಗಳಾಗಿವೆ. ಖಾಜಾ ಬಂದೇನವಾಜ ದರ್ಗಾದಿಂದ ಬೆಳ್ಳಿ ಬಟ್ಟಳ ತಂದ ನಂತರವೇ ಶ್ರೀ ಶರಣಬಸವೇಶ್ವರ ರಥೋತ್ಸವ ನೆರವೇರುತ್ತದೆ. ಹಾಗೆಯೇ ಶರಣಬಸವೇಶ್ವರ ದೇವಸ್ಥಾನದ ಸ್ವಾಮಿಗಳಿಂದ ಗಂಧ ತಂದ ನಂತರವೇ ಬಂದೇ ನವಾಬ ದರ್ಗಾದ ಉರುಸು ಪ್ರಾರಂಭವಾಗುತ್ತದೆ. ಇದು ಹಿಂದು, ಮುಸ್ಲಿಂ ಹಾಗೂ ಬೌದ್ಧ ಧರ್ಮಗಳ ತ್ರಿವೇಣಿ ಸಂಗಮಕ್ಕೆ ಸೊಗಸನ್ನು ಉಂಟುಮಾಡಿದೆ. ಇಲ್ಲಿನ ಮತ್ತೊಂದು ವೈಶಿಷ್ಟ್ಯವೆಂದರೆ ಇಲ್ಲಿನ ಬೌದ್ಧವಿಹಾರ. ಇದು ಇಡೀ ಏಶಿಯಾ ಖಂಡದಲ್ಲಿಯೇ ಅತ್ಯಂತ ದೊಡ್ಡದಾಗಿದ್ದು, ಭೂ ವೈಶಿಷ್ಟ್ಯತೆಯ ಬೆಸುಗೆಯಾಗಿದೆ. ಈಚೆಗೆ ಭಾರತದ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟೀಲ್ ಹಾಗೂ ಬೌದ್ಧ ಧರ್ಮಗುರುಗಳಾದ ದಲೈಲಾಮಾ ಅವರಿಂದ ರಾಷ್ಟ್ರಕ್ಕೆ ಸಮರ್ಪಣೆಗೊಂಡುದು ಜಿಲ್ಲೆಗೆ ಹೆಮ್ಮೆಯ ಸಂಗತಿ. ಹೀಗೆ ಈ ಜಿಲ್ಲೆ ಸಾಹಿತ್ಯ, ಸಂಸ್ಕತಿ, ಶಿಲ್ಪಕಲೆ ಮುಂತಾದ ಅನೇಕ ಮಹತ್ವ ವೈಶಿಷ್ಟ್ಯಗಳನ್ನು ಹೊಂದಿದೆ.

### ಗುಲಬರ್ಗಾ ಜಿಲ್ಲೆಯ ಸಾಂಸ್ಕೃತಿಕ ಕೇಂದ್ರಗಳು

ಜೈನರ ಕಾವ್ಯದ, ಶರಣರ ವಚನದ, ದಾಸರ ಹಾಡಿನ ಬೀಡಾದ ಕಲಬುರ್ಗಿ ಜಿಲ್ಲೆ ಫಲವತ್ತಾದ ಸಾಂಸ್ಕೃತಿಕ ಪರಂಪರೆಗೆ ಹೆಸರುವಾಸಿಯಾಗಿದೆ. ಈ ಜಿಲ್ಲೆಯು ಧರ್ಮಸಮನ್ವಯ ಬಾಂಧವ್ಯದ ಬೀಡಾಗಿದೆ. ಸರ್ವಧರ್ಮಗಳ ಆಡುಂಬೊಲವಾಗಿದೆ. ಕಲಬುರ್ಗಿಯ ಶರಣಬಸವೇಶ್ವರರು, ಖಾಜಾ ಬಂದೇನವಾಜ, ಸೂಫಿ ಸಂತರು, ಕೊಡೇಕಲ್ಲ ಬಸವಣ್ಣ, ತಿಂಥಣಿ ಮೋನಪ್ಪ, ಮುಂತಾದ ಧರ್ಮ ಸಮನ್ವಯಿ ಸಂತರು, ಶರಣರು ಬಾಳಿ ಬೆಳಗಿದ ಈ ಜಿಲ್ಲೆಯಲ್ಲಿ. ಈ ಜಿಲ್ಲೆಯ ಮಳಖೇಡದಲ್ಲಿ ಬಸವಾದಿ ಶರಣರು ಪ್ರಾರಂಭಿಸಿದ ಸಮಾಜೋಧಾರ್ಮಿಕ ಆಂದೋಲನ ನಡೆಯಿತ್ತು. ಈ ಜಿಲ್ಲೆಯ ಪಕ್ಕದಲ್ಲಿರುವ ಬಸವಕಲ್ಯಾಣದಲ್ಲಿ ಸುಮಾರು ಒಂದು ಸಾವಿರ ವರ್ಷಗಳ ಪೂರ್ವದ ಅತ್ಯಂತ ಮಹತ್ವದ ಮತ್ತು ವ್ಯವಸ್ಥಿತವಾದ ಘಟಿಕಾಸ್ಥಾನವಿದ್ದುದು ಈ ಜಿಲ್ಲೆಯ ನಾಗಾರಿಯಲ್ಲಿ. ಸುಪ್ರಸಿದ್ಧ ದೇವಾಲಯಗಳನ್ನು ಭಾವೈಕ್ಯದ ಮಠಮಾನ್ಯಗಳನ್ನು ಈ ಜಿಲ್ಲೆ ಒಳಗೊಂಡುದು ವಿಶೇಷವಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿರುವ ಮಳಖೇಡ ಒಂದು ಸಣ್ಣ ಊರು. ಇದು ಹಿಂದು ರಾಷ್ಟ್ರಕೂಟ ದೊರೆ ನೃಪತುಂಗನ ರಾಜಧಾನಿಯಾಗಿತ್ತು. ನೃಪತುಂಗ ದೊರೆ ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಪಾರವಾದ ಆಸಕ್ತಿಯನ್ನು ಹೊಂದಿದ್ದ ಕವಿಹೃದಯವುಳ್ಳ ಆತನು ಅನೇಕ ಕವಿಗಳಿಗೆ ಆಶ್ರಯ ನೀಡಿ ಸಾಹಿತ್ಯ ಸೃಷ್ಟಿಗೆ ಕಾರಣನಾಗಿದ್ದಾನೆ. ಆತನ ಆಸ್ಥಾನದಲ್ಲಿ ಶ್ರೀವಿಜಯನೆಂಬ ಸಭಾಸದ ಬರೆದ

ಕವಿರಾಜಮಾರ್ಗ ಕನ್ನಡದ ಮೊದಲ ಉಪಲಬ್ಧ ಕೃತಿಯಾಗಿದೆ. ಮಳಖೇಡ ರಾಷ್ಟ್ರಕೂಟ ಅರಸರ ಹೆಮ್ಮೆಯ ರಾಜಧಾನಿಯಾಗಿದ್ದು ಕಲಬುರ್ಗಿಯಿಂದ ಮೂವತ್ತು ಮೈಲುಗಳ ಅಂತರದಲ್ಲಿದೆ. ಅಲ್ಲಿ ಈಗಲೂ ಕೋಟೆಯಿದ್ದು ರಾಷ್ಟ್ರಕೂಟ ಅರಸರ ಅವಶೇಷಗಳು ನೋಡಲು ಸಿಗುತ್ತವೆ. ಇತಿಹಾಸವನ್ನು ಹೊಂದಿದ ಮಾನಖೇಡವನ್ನು ನೋಡಲು ಅನೇಕ ಯಾತ್ರಿಕರು ಬರುವುದುಂಟು. ಇತ್ತೀಚೆಗೆ ಕರ್ನಾಟಕ ಸರ್ಕಾರ ಮಳಖೇಡ ಉತ್ಸವವನ್ನು ಆಚರಿಸುತ್ತಲಿದೆ. ಇದೊಂದು ಪ್ರವಾಸಿ ಕೇಂದ್ರವೂ ಕನ್ನಡದ ಗಂಡು ಮೆಟ್ಟಿನ ಸಾಂಸ್ಕೃತಿಕ ಕೇಂದ್ರವೂ ಆಗಿದೆ.

ತಿಂಥಿಣಿ ಮೌನೇಶ್ವರ ಒಬ್ಬ ಧರ್ಮ ಸಮನ್ವಯ ಸಂತ. ಹಿಂದು ಮುಸ್ಲಿಮರಲ್ಲಿ ಬಾಂಧವ್ಯದ ಬೆಸೆಗೆಯನ್ನು ಬೆಳೆಸಿದ ಮಹಾಪುರುಷ. ಈತ ಸುರುಪುರ ತಾಲ್ಲೂಕಿನ ದೇವರಗೋನಾಳದಲ್ಲಿ ಜನಿಸಿ ತಿಂಥಿಣಿಯಲ್ಲಿ ಮರಣ ಹೊಂದಿದ. ಈತನ ಸಮಾಧಿಯ ಮೇಲೆ ಭವ್ಯವಾದ ದೇವಾಲಯವನ್ನು ನಿರ್ಮಿಸಲಾಗಿದೆ. ಈ ದೇವಾಲಯದ ವಾಸ್ತುಶಿಲ್ಪ ಹಿಂದು ಮುಸ್ಲಿಂ ಸಮನ್ವಯತೆಯ ಪ್ರತೀಕವಾಗಿದೆ.

ಭಾರತದ ನಾನಾ ಮೂಲೆಗಳಿಂದ ಜನ ಇಲ್ಲಿಗೆ ಬರುತ್ತಾರೆ. ಇಂದೊಂದು ಪವಿತ್ರ ಯಾತ್ರಾ ಸ್ಥಳವಾಗಿದೆ. ವಿಶ್ವಕರ್ಮರು ಮೌನೇಶ್ವರರನ್ನು ತಮ್ಮ ಆರಾಧ್ಯ ದೈವವೆಂದು ಭ್ರಮಿಸಿದ್ದಾರೆ. ವಿಶ್ವಕರ್ಮರ ಬೃಹತ್ ಕೇಂದ್ರವೇ ಈ ದೇವಾಲಯವಾಗಿದೆ. ತಿಂಥಿಣಿ ಅವರ ಸಾಂಸ್ಕೃತಿಕ ಕೇಂದ್ರವಾಗಿದೆ. ಹೀಗಿದ್ದು ಎಲ್ಲ ಜಾತಿಮತಗಳ ಜನರು ಇಲ್ಲಿಗೆ ಬರುವುದುಂಟು. ಧರ್ಮಸಮನ್ವಯ ಭಾವನೆಗೆ ವಿಶ್ವ ಬಂಧುತ್ವಕ್ಕೆ ಈ ಸ್ಥಳ ಹೆಸರುವಾಸಿಯಾಗಿದೆ.

ತಿಂಥಿಣಿ ಮೌನೇಶ್ವರರಂತೆ ಕೊಡೇಕಲ್ಲ ಬಸವಣ್ಣನವರು ಒಬ್ಬ ಧರ್ಮ ಸಮನ್ವಯಿ ಸಂತ. ಈತ ಸುರುಪುರ ತಾಲೂಕಿನ ಕೊಡೇಕಲ್ಲ ಗ್ರಾಮದಲ್ಲಿ ನೆಲೆ ನಿಂತ. ಈ ಜನ ಜಾತಿ ಮತಗಳನ್ನು ಮೀರಿ ನಿಂತ ಸಂತ ಮುಸ್ಲಿಮರು ಈತನಿಗೆ ಮಹಮ್ಮದ ಸರ್ದಾರ ಎಂದರೆ, ಹಿಂದುಗಳು ಬಸವಣ್ಣ ಎನ್ನುವರು. ಕೊಡೇಕಲ್ಲದಲ್ಲಿ ಈತನ ಸಮಾಧಿಯಿದ್ದು ಅದರ ಮೇಲೆ ಭವ್ಯವಾದ ಮಠವು ನಿರ್ಮಾಣವಾಗಿದೆ. ಈ ಮಠವು ಮುಸ್ಲಿಂ ಮಸೀದಿಯಂತೆ ಕಾಣುವುದು. ಒಳಗೆ ವೀರಶೈವ ಮಠದಂತೆ ಕಾಣುತ್ತದೆ. ಈ ಮಠವು ಹಿಂದುಗಳಿಗೂ ಮುಸ್ಲಿಮರಿಗೂ ಪವಿತ್ರವಾದ ಯಾತ್ರಾಸ್ಥಳವಾಗಿದೆ. ಇದು ಗುಲಬರ್ಗಾ ಜಿಲ್ಲೆಯ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾಗಿದೆ. ಕೊಡೇಕಲ್ ಬಸವಣ್ಣನು ಕಾಲಜ್ಞಾನ ವಚನಗಳನ್ನು ಬರೆದಿದ್ದಾನೆ. ಕಾಲಜ್ಞಾನ ಸತ್ವಕ್ಕೆ ಮಠವೇ ಕೇಂದ್ರ ನೆಲೆಯಾಗಿದೆ. ಈ ಮಠವು ಭಾವೈಕ್ಯತೆಯ ಜೀವಂತ ಸ್ಮಾರಕವಾಗಿದೆ. ಸರ್ವಧರ್ಮದ ಭಕ್ತರಿಗೆ, ಯಾತ್ರಿಕರಿಗೆ ಇದು ಪವಿತ್ರವಾದ ಯಾತ್ರಾಸ್ಥಳವಾಗಿದೆ.

### ಶರಣ ಬಸವೇಶ್ವರರು

ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲೂಕಿನ ಅರಳಗುಂಡಿಗಿ ಗ್ರಾಮದಲ್ಲಿ ಶ್ರೀ ಶರಣ ಬಸವೇಶ್ವರರು ಕ್ರಿ.ಶ.೧೭೪೬ರಲ್ಲಿ ಜನಿಸಿದರು. ಕರುಣಾಮಯಿಗಳು, ಮಹಾದಾಸೋಹಿಗಳು, ದೈವಭಕ್ತರು ಆದ ಶರಣ ಬಸವೇಶ್ವರರು ಅರಳಗುಂಡಿಗೆಯಿಂದ ಗುಲಬರ್ಗಾಕ್ಕೆ ಬಂದು ದೊಡ್ಡಪ್ಪ ಗೌಡರ ಬಳಿಗೆ

ಬಂದರು. ಲೋಕಕಲ್ಯಾಣ ಕಾರ್ಯಕ್ರಮಗಳಲ್ಲಿ ತೊಡಗಿದರು. ಮಹಿಮಾಪುರುಷರಾದ ಇವರು ಶರಣರ ಮಾರ್ಗದಲ್ಲಿ ಮುನ್ನಡೆದರು. ಇವರು ಲಿಂಗೈಕ್ಯರಾದ ಮೇಲೆ ಇವರ ಸಮಾಧಿಯ ಮೇಲೆಯ ಭವ್ಯವಾದ ಶರಣಬಸವೇಶ್ವರ ದೇವಾಲಯ ನಿರ್ಮಾಣಗೊಂಡಿದೆ. ಇಲ್ಲಿ ಪ್ರತಿವರ್ಷ ವಿಜೃಂಭಣೆಯಿಂದ ಜಾತ್ರೆ ನಡೆಯುತ್ತದೆ. ಇದೊಂದು ಪವಿತ್ರ ಯಾತ್ರಾ ಸ್ಥಳವಾಗಿದೆ. ಕೇಂದ್ರ ಸರಕಾರವು ಇದನ್ನು ರಾಷ್ಟ್ರೀಯ ಪ್ರವಾಸಿ ಕೇಂದ್ರವೆಂದು ಪರಿಗಣಿಸಿದೆ. ಶ್ರೀ ಶರಣಬಸವೇಶ್ವರ ಪೀಠದ ಎಂಟನೇ ಮಹಾದಾಸೋಹ ಪೀಠವನ್ನು ಅಲಂಕರಿಸಿರುವರು. ಪೂಜ್ಯ ಡಾ.ಶರಣಬಸಪ್ಪ ಅಪ್ಪ ಅವರ ಮಾರ್ಗದರ್ಶನದಲ್ಲಿ ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯ ವತಿಯಿಂದ ಅನೇಕ ಶಾಲಾ ಕಾಲೇಜುಗಳು ನಡೆಯುತ್ತಿವೆ. ಪೂಜ್ಯ ಅಪ್ಪಾ ಅವರ ದಿವ್ಯ ಸನ್ನಿಧಿ ಹಾಗೂ ಸೂಕ್ತ ಮಾರ್ಗದರ್ಶನದಲ್ಲಿ ಅನುಭವ ಮಂಟಪ ಕಾಯಕ ಇಂಟರ್‌ನ್ಯಾಶನಲ್ ವೀರಶೈವ ವಸ್ತುಸಂಗ್ರಹಾಲಯ ಮುಂತಾದ ನವನವೀನ ಯೋಜನೆಗಳ ಶುದ್ಧ ರೂಪಕ್ಕೆ ಬಂದಿವೆ. ನಮ್ಮ ನಾಡಿನ ಸುಪ್ರಸಿದ್ಧ ಸಾಂಸ್ಕೃತಿಕ ಕೇಂದ್ರವಾಗಿ ಶರಣಬಸವೇಶ್ವರ ಸಂಸ್ಥಾನವು ತುಂಬ ಹೆಮ್ಮೆಯ ಸಂಗತಿ.

**ಹಜರತ ಖಾಜಾ ಬಂದೇ ನವಾಜದರ್ಗಾ**

ಈ ದರ್ಗಾ ದಕ್ಷಿಣ ಭಾರತದಲ್ಲಿಯೇ ಅತ್ಯಂತ ದೊಡ್ಡದು. ಇದು ಹಜರತ ಖಾಜಾಬಂದೇ ನವಾಜರ ಸಮಾಧಿಯ ಮೇಲೆ ನಿರ್ಮಾಣಗೊಂಡಿದೆ. ಹಜರತ ಖಾಜಾ ಬಂದೇ ನವಾಜರು ಒಬ್ಬ ಶ್ರೇಷ್ಠ ಸಂತರು, ಮಹಾತ್ಮರು. ಜಾತಿ ಮತ ಪಂಥಗಳ ಭೇದ ಭಾವವಿಲ್ಲದೆ ಎಲ್ಲ ಜನರು ಇವರನ್ನು ಆರಾಧಿಸುವರು, ಗೌರವಿಸುವರು, ಮುಸ್ಲಿಂ ಬಾಂಧವರಿಗೆ ಇದೊಂದು ಪವಿತ್ರ ಯಾತ್ರಾಸ್ಥಳವಾಗಿದೆ. ಸಾಂಸ್ಕೃತಿಕ ಕೇಂದ್ರವೂ ಆಗಿದೆ. ಖಾಜಾ ಬಂದೇ ನವಾಜ ದರ್ಗಾ ಹಾಗೂ ಶರಣಬಸವೇಶ್ವರ ಈ ಎರಡು ದೇವಾಲಯಗಳು ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಾದುದು ವಿಶೇಷವಾಗಿದೆ.

**ಸನ್ನತಿ**

ಇದು ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನಲ್ಲಿರುವ ಅತಿ ಸಣ್ಣ ಗ್ರಾಮ. ಪ್ರಾಚೀನ ಕಾಲದಲ್ಲಿ ಇದು ಬೌದ್ಧ ಕೇಂದ್ರವಾಗಿತ್ತು. ಬೌದ್ಧ ಪರಂಪರೆಯ ಮಹಾಯಾನ ಶಾಖೆಯ ಆರಾಧನಾ ಕೇಂದ್ರವಾಗಿ ಬೆಳೆದ ಸನ್ನತಿಯಲ್ಲಿ ಈಗಲೂ ಬೌದ್ಧ ಧರ್ಮದ ಅನೇಕ ಸ್ಮಾರಕಗಳು ಅವಶೇಷಗಳು ಸಿಗುತ್ತವೆ. ಭೀಮಾನದಿಯ ದಂಡೆಯ ಮೇಲಿರುವ ಬುದ್ಧನ ಜೀವನವನ್ನು ಸಂಕೇತಿಸುವ ಐದು ಆಯತ ಸ್ತಂಭಗಳು ದೊರತಿವೆ. ಇಲ್ಲಿಯೇ ಚಂದ್ರಕಲಾ ಪರಮೇಶ್ವರಿಯ ದೇವಾಲಯವಿದೆ. ಸದ್ಯ ಸನ್ನತಿ ಒಂದು ಯಾತ್ರಾಸ್ಥಳವೂ ಹೌದು, ಸಾಂಸ್ಕೃತಿಕ ಕೇಂದ್ರವೂ ಹೌದು. ಇಲ್ಲಿಯ ಚಂದ್ರಕಲಾ ಪರಮೇಶ್ವರಿಯ ದೇವಾಲಯ ಬೌದ್ಧರ ಕಾಲದಲ್ಲಿ ಬೌದ್ಧರ ಸ್ಥಾನವಾಗಿಯೂ ಶೈವ ಶಕ್ತರ ಕಾಲದಲ್ಲಿ ಪಾರ್ವತಿ ಮಹಾಕಾಳಿಯ ಸ್ಥಾನವಾಗಿಯೂ, ವೈಷ್ಣವರಿಗೆ ಶ್ರೀರಾಮ ಸರಸ್ವತಿಯ ಸ್ಥಾನವಾಗಿಯೂ ಮಾರ್ಪಾಟು ಹೊಂದುತ್ತ ಬಂದಿವೆ. ಸನ್ನತಿ ನಮ್ಮ ರಾಜ್ಯದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಒಂದಾಗಿದೆ.

**ನಾಗಾವಿ**

ಕರ್ನಾಟಕದ ಘಟಿಕಾ ಸ್ಥಾನಗಳಲ್ಲಿ ಇದು ಅತ್ಯಂತ ವ್ಯವಸ್ಥಿತವಾದುದು ಮತ್ತು ಪ್ರಮುಖವಾದುದು. ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ನಾಗಾವಿಯು ರಾಷ್ಟ್ರಕೂಟ ಅರಸು ಮನೆತನದಲ್ಲಿ ನಾಲ್ಕನೆಯ ಗೋವಿಂದನು ತನ್ನ ಪಟ್ಟಾಭಿಷೇಕ ಕಾಲದಲ್ಲಿ ೬೦೦ ಅಗ್ರಹಾರಗಳಿಗೆ ಮತ್ತು ೮೦೦ ವಿದ್ಯಾರ್ಥಿಗಳಿಗೆ ದತ್ತಿ ಬಿಟ್ಟ ವಿಷಯಗಳನ್ನು ಶಿಲಾಶಾಸನಗಳು ಹೇಳುತ್ತವೆ. ಆ ಸಮಯದಲ್ಲಿ ನಾಗಾವಿಯು ಮಹಾ ಅಗ್ರಹಾರವಾಗಿತ್ತೆಂದು ಅತ ಅಲ್ಟೆಕರ ಅಭಿಪ್ರಾಯ ಪಡುತ್ತಾರೆ. ರಾಷ್ಟ್ರಕೂಟರ ಕಾಲದಲ್ಲಿ ನಾಗಾವಿಯು ಸುವ್ಯವಸ್ಥಿತವಾದ ಶಿಕ್ಷಣ ಕೇಂದ್ರವಾಗಿ ಬೆಳೆದುಬಂದಿದೆ. ಕ್ರಿ.ಶ.೯೯೫ರಲ್ಲಿ ಹೈಹಯ ವಂಶದ ಮಹಾಮಂಡಲೇಶ್ವರ ಶಿರಸರಸನು ನಾಗಾವಿಯನ್ನು ಜ್ಞಾನವಾದ ಅಖಂಡವಾಗಿ ಅವ್ಯಾಹತವಾಗಿ ನಡೆಯಲೆಂದು ಸಾಕಷ್ಟು ಭೂಮಿ ಸಿಮೆಗಳನ್ನು ದತ್ತೀಕೊಟ್ಟ ವಿಷಯ ಶಾಸನಗಳಲ್ಲಿ ವ್ಯಕ್ತವಾಗಿದೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಒಂದನೇ ಸೋಮೇಶ್ವರನ ಕಾಲದ ಘಟಿಕಾಲಯವಾಗಿ ಮಾರ್ಪಾಟು ಹೊಂದಿತು.

**ಶಿರವಾಳ**

ಈ ಗ್ರಾಮವು ಗುಲಬರ್ಗಾ ಜಿಲ್ಲೆಯ ಶಹಾಪುರ ತಾಲೂಕಿನಲ್ಲಿದೆ. ಇದು ಪೌರಾಣಿಕವಾಗಿ ಮತ್ತು ಐತಿಹಾಸಿಕವಾಗಿ ತನ್ನದೇ ಆದ ಮಹತ್ವವನ್ನು ಹೊಂದಿದೆ. ಶಿರವಾಳದಲ್ಲಿ ಬೌದ್ಧಧರ್ಮದ ಸ್ತೂಪಗಳು ದೊರೆತಿರುವುದರಿಂದ ಪ್ರಾಚೀನ ಬೌದ್ಧ ಕೇಂದ್ರಗಳಲ್ಲಿ ಒಂದಾದ ಸನ್ನತಿ ಜೊತೆಯಲ್ಲಿ ಇದರ ಸಂಬಂಧವಿರಬಹುದೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಪ್ರಾಚೀನ ಕಾಲದಲ್ಲಿ ಇಲ್ಲಿ ೩೬೫ ಲಿಂಗಗಳು ಮತ್ತು ಬಾವಿಗಳು ಇದ್ದವೆಂದು ಐತಿಹ್ಯವಿದ್ದು ಇಂದು ಭಿನ್ನ ಭಿನ್ನ ಶಿಲ್ಪಗಳ ನೈಪುಣ್ಯ ಸಾಹಸಗಳಿಗೆ ಸಾಕ್ಷಿಗಳಾಗಿ ನೀಡಿರುವ ಸುಸ್ಥಿತಿಯಲ್ಲಿರುವ ೧೫ ದೇವಾಲಯಗಳು ಮಾತ್ರ ಇವೆ. ಪುರಾತತ್ವ ಇಲಾಖೆಯು ನಡೆಸಿದ ಉತ್ಖನನದ ಫಲವಾಗಿ ಸೂರ್ಯ ದೇವಾಲಯ ನಿರ್ಮಾಣವಾದ ಮಲ್ಲಿಕಾರ್ಜುನ ದೇವಾಲಯ ಇದೆ. ಇದು ಕಲ್ಯಾಣ ಚಾಲುಕ್ಯರ ಕಾಲದ್ದೆಂದು ಬೆಳಕಿಗೆ ಬಂದಿದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಪಂಚಲಿಂಗ ಪೀಠಗಳನ್ನು ಸುಂದರವಾದ ಸಿದ್ಧಲಿಂಗೇಶ್ವರ ದೇವಾಲಯವನ್ನು ನಿರ್ಮಾಣ ಮಾಡಲಾಯಿತು.

**೧.೪. ಅಧ್ಯಯನ ಗುರಿ ಮತ್ತು ಉದ್ದೇಶಗಳು**

೧. ಅಂಗನವಾಡಿ ಕಾರ್ಯಕರ್ತೆಯರ ಶೈಕ್ಷಣಿಕ, ಕೌಟುಂಬಿಕ, ವೈವಾಹಿಕ ಮತ್ತು ಸಾಮಾಜಿಕ ಅಂತಸ್ತನ್ನು ತಿಳಿದುಕೊಳ್ಳುವುದು.

೨. ಅಂಗನವಾಡಿ ಕಾರ್ಯಕರ್ತೆಯಾಗಲು ಕಾರಣ ಹಾಗೂ ಅವರು ಎಷ್ಟು ವರ್ಷ ಸೇವೆ ಸಲ್ಲಿಸಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದು.

೩. ಅಂಗನವಾಡಿ ಕೇಂದ್ರದ ಕಟ್ಟಡದ ಬಗ್ಗೆ ತಿಳಿದುಕೊಳ್ಳುವುದು.

೪. ಅಂಗನವಾಡಿ ಕಾರ್ಯಕರ್ತೆಯರು ಮಕ್ಕಳಿಗೆ ಕೊಡುವ ಶಿಕ್ಷಣ, ಆಹಾರ, ರೋಗ, ನಿರೋಧಕ, ಚುಚ್ಚುಮದ್ದು ಮತ್ತು ಆರೋಗ್ಯ ತಪಾಸಣೆ ಮಾಡಿಸುವುದರ ಬಗ್ಗೆ ತಿಳಿದುಕೊಳ್ಳುವುದು.

೫. ಅಂಗನವಾಡಿ ಕೇಂದ್ರಕ್ಕೆ ಅಧಿಕಾರಿಗಳು ಎಷ್ಟು ದಿವಸಕ್ಕೊಮ್ಮೆ ವಿಚಾರಣೆ ಮಾಡಲು ಹೋಗುತ್ತಾರೆ ಎಂಬುದನ್ನು ಅರಿಯುವುದು.

೬. ಮಹಿಳೆಯರ ಅಭಿವೃದ್ಧಿಯಲ್ಲಿ ಸರ್ಕಾರ ಯಾವ ಯೋಜನೆಗಳಿಗೆ ಹೆಚ್ಚಿನ ಮಹತ್ವ ಕೊಡುತ್ತದೆ ಮತ್ತು ಮಹಿಳೆಯರ ಕಲ್ಯಾಣ ಕಾರ್ಯಕ್ರಮ ಯಶಸ್ವಿಯಾಗಿದೆಯೇ ಎಂಬುದನ್ನು ಅರಿತುಕೊಳ್ಳುವುದು.

೭. ಕಾರ್ಯಕರ್ತೆಯರು ಮಹಿಳಾ ಮಂಡಲದಲ್ಲಿ ಹಾಗೂ ಸಭೆಯಲ್ಲಿ ಯಾವ ವಿಷಯದ ಬಗ್ಗೆ ಚರ್ಚಿಸುತ್ತಾರೆ ಎಂಬುದನ್ನು ಅರಿಯುವುದು.

೮. ಕಾರ್ಯಕರ್ತೆಯರು ಎಷ್ಟು ಸ್ವ-ಸಹಾಯ ಸಂಘ ನಡೆಸುತ್ತಾರೆ ಎಂಬುದನ್ನು ಅರಿತುಕೊಳ್ಳುವುದು.

೯. ಸರಕಾರ ಕೊಡುವ ಸಹಾಯಧನ ಹಾಗೂ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಬಗ್ಗೆ ಅವರಿಗೆ ಸಂಪೂರ್ಣ ತೃಪ್ತಿ ಇದೆಯೇ ಎಂಬುದನ್ನು ತಿಳಿದುಕೊಳ್ಳುವುದು.

೧೦. ಅಂಗನವಾಡಿ ಕಾರ್ಯಕರ್ತೆಯು ಮಗುವಿನ ಸಮಗ್ರ ವಿಕಾಸ ಯಾವ ರೀತಿ ಕಾರ್ಯ ಮಾಡುತ್ತಾರೆ ಎಂಬುವುದು ತಿಳಿಯುವುದು.

೧೧. ಅಂಗನವಾಡಿ ಪಂಚಾಯತ ನಡುವಿನ ಸಂಬಂಧವನ್ನು ಅರಿಯಲು.

೧೨. ಅಂಗನವಾಡಿ ಕಾರ್ಯಕರ್ತೆಯು ಮಗು ಗರ್ಭಿಣಿ ತಾಯಿ ಆರೋಗ್ಯ ಬಗ್ಗೆ ಎಷ್ಟು ವಿಷಯವನ್ನು ತಿಳಿದಿರು ಬಗ್ಗೆ.

೧೩. ಅಂಗನವಾಡಿಯಲ್ಲಿ ಆಟಿಕೆಯ ಸಾಮಗ್ರಿಗಳ ಸರಿಯಾದ ರೀತಿಯಲ್ಲಿ ಬಳಕೆಯಾಗುತ್ತಿವೆ ಇಲ್ಲವೆ ಎಂಬುದು ತಿಳಿಯಲು.

೧೪. ಅಂಗನವಾಡಿಯಲ್ಲಿ ಮಗುವಿಗೆ ಶಾಲಾಪೂರ್ವಶಿಕ್ಷಣ, ಬೌದ್ಧಿಕ ಪೂರಕ ಪೌಷ್ಟಿಕ ಆಹಾರ, ಮಾನಸಿಕ, ದೈಹಿಕ, ಬೌದ್ಧಿಕ ಬೆಳವಣಿಗೆ ಯಾವ ರೀತಿಯಲ್ಲಿ ನಡೆಯುತ್ತಿದೆ ಎಂಬುದೆನ್ನು ತಿಳಿಯಲು.

೧೫. ಅಂಗನವಾಡಿ ಕಾರ್ಯಕರ್ತೆಯರು ಎಷ್ಟು ಮಕ್ಕಳಿಗೆ ಲಸಿಕೆ, ಚುಚ್ಚುಮದ್ದನ್ನು ಜನನ ಮರಣ ಪ್ರಮಾಣ ಕುರಿತ ದಾಖಲಾತಿಯನ್ನು ಪುಸ್ತಕ ತಿಳಿಯಬಹುದಾಗಿದೆ.

೧೬. ಅಂಗನವಾಡಿಗೆ ಬರುವ ತಂದೆ ತಾಯಿ ಜೊತೆಯಲ್ಲಿ ಕಾರ್ಯಕರ್ತೆಯರ ಬಾಂದವ್ಯ ತಿಳಿಯದು.

# ಅಧ್ಯಾಯ ಎರಡು

೧. ಅಂಗನವಾಡಿಗೆ ಯುನಿಸೆಫ಼ ನೀಡಿದ ಕೊಡುಗೆ

೨. ಅಂಗನವಾಡಿ ಕೆಲಸ - ಕಾರ್ಯಗಳು

೩. ಅಂಗನವಾಡಿಯಲ್ಲಿ ಇರಬೇಕಾದ ದಾಖಲೆಗಳ ರಿಜಿಸ್ಟರುಗಳು

೪. ಇಲಾಖಾ ರಚನೆಗಳು

# ಅಧ್ಯಾಯ ಎರಡು

## ೨.೧.UNICE-ಯುನಿಸೆಫ್ ನೀಡಿದ ಕೊಡುಗೆ

| | | |
|---|---|---|
| ಯುನಿಸೆಫ್ | : | ವಿಶ್ವಸಂಸ್ಥೆಯ ಮಕ್ಕಳ ನಿಧಿ |
| ಸ್ಥಾಪನೆ | : | ಡಿಸೆಂಬರ್ ೧೧, ೧೯೪೬ |
| ಮುಖ್ಯ ಕಛೇರಿ | : | ನ್ಯೂಯಾರ್ಕ್ |
| ಮುಖ್ಯಸ್ಥರು | : | ಆನವೆನೆಮನ |
| ವ್ಯಾಪ್ತಿ | : | ೧೯೩ ರಾಷ್ಟ್ರಗಳು |
| ಧ್ಯೇಯ | : | ಮಕ್ಕಳ ಮತ್ತು ತಾಯಂದಿರ ಜೀವನ ಗುಣಮಟ್ಟ ಸುಧಾರಣೆ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮಕ್ಕಳ ಮತ್ತು ತಾಯಂದಿರ ಜೀವನ ಗುಣಮಟ್ಟ. |

ಎರಡನೆಯ ಮಹಾಯುದ್ಧದಿಂದಾಗಿ ಅನೇಕ ರಾಷ್ಟ್ರಗಳು ನಲುಗಿದ್ದವ ಆರ್ಥಿಕವಾಗಿ ದಿವಾಳಿಯಾದವು. ಅತೀ ಹೆಚ್ಚು ತೊಂದರೆಗೊಳಗಾದವರೆಂದರೆ ಮಕ್ಕಳು ಮತ್ತು ಮಹಿಳೆಯರು. ಇವರಿಗೆ ತುರ್ತು ಆಹಾರ ಮತ್ತು ಆರೋಗ್ಯ ಸೇವೆ ಒದಗಿಸಲು ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ಡಿಸೆಂಬರ್ ೧೧, ೧೯೪೬ರಂದು ವಿಶ್ವಸಂಸ್ಥೆಯ ಮಕ್ಕಳ ನಿಧಿ(United Nations Children's Fund) ಅಥವಾ ಯುನಿಸೆಫ್(Unicef) ಸ್ಥಾಪಿಸಿತು. ಯುನಿಸೆಫ್ ೧೯೫೩ರಲ್ಲಿ ವಿಶ್ವಸಂಸ್ಥೆಯ ಶಾಶ್ವತ ಅಂಗ ಸಂಸ್ಥೆಯಾಯಿತು. ಮೂಲತಃ ಯುನಿಸೆಫ್ ವಿಶ್ವಸಂಸ್ಥೆಯ ಅಂತಾರಾಷ್ಟ್ರೀಯ ಮಕ್ಕಳ ತುರ್ತು ನಿಧಿ ಎಂದು ಕರೆಯುತ್ತಿದ್ದರು. ಯುನಿಸೆಫ್ ಕೇಂದ್ರ ಕಛೇರಿ ನ್ಯೂಯಾರ್ಕ್ ನಗರದಲ್ಲಿದೆ. ಯುನಿಸೆಫ್ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮತ್ತು ಮಹಿಳೆಯರಿಗೆ ದೀರ್ಘಕಾಲೀನ ಮಾನವೀಯ ಮತ್ತು ಅಭಿವೃದ್ಧಿಪರ ಸಹಾಯ ಒದಗಿಸುತ್ತದೆ.

### ಯುನಿಸೆಫ್ ಸಂಘಟನೆ

ಯುನಿಸೆಫ್‌ನ ಸಿಬ್ಬಂದಿ ೧೯೦ ರಾಷ್ಟ್ರಗಳಲ್ಲಿ ಮತ್ತು ಇತರೆ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಆತಿಥಿಯ ಸರಕಾರಗಳ ಸಹಕಾರದಿಂದ ೨೦೦ಕ್ಕೂ ಹೆಚ್ಚು ರಾಷ್ಟ್ರಗಳ ಕಛೇರಿ

ಯುನಿಸೆಫ್‌ನ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಏಳು ಪ್ರಾದೇಶಿಕ ಕಛೇರಿಗಳು ವಿವಿಧ ರಾಷ್ಟ್ರಗಳಲ್ಲಿ ಯುನೆಸ್ಕೊ ಸಿಬ್ಬಂದಿಗೆ ಮಾರ್ಗದರ್ಶನ ಮತ್ತು ಅಗತ್ಯ ತಾಂತ್ರಿಕ ನೆರವನ್ನು ನೀಡುತ್ತಿವೆ.

ಸಂಘಟನೆಯ ನಿರ್ವಹಣೆ ಮತ್ತು ಆಡಳಿತವು ಅದರ ಕೇಂದ್ರ ಕಛೇರಿ(ನ್ಯೂಯಾರ್ಕ್)ಯಲ್ಲಿ ನಡೆಯುತ್ತದೆ. ಯುನಿಸೆಫ್‌ನ ಪೂರೈಕೆ ವಿಭಾಗ ಕೋಪನ್ ಹೇನ್‌ನಲ್ಲಿದೆ. ಇದು ಅಗತ್ಯ ವಸ್ತುಗಳಾದ ಜೀವ ರಕ್ಷಕ ಲಸಿಕೆಗಳ ಎಚ್‌ಐವಿ ಪೀಡಿತ ಮಕ್ಕಳ ಮತ್ತು ತಾಯಂದಿರಿಗೆ ಆ್ಯಂಟಿರಿಪ್ರೊವೈರಲ್ ಔಷಧಗಳ ಪೌಷ್ಟಿಕ ಆಹಾರ, ತುರ್ತು ಮನೆಗಳು, ಶೈಕ್ಷಣಿಕ ವಸ್ತುಗಳು ಇತ್ಯಾದಿಗಳನ್ನು ಪೂರೈಸುತ್ತದೆ. ಯುನಿಸೆಫ್‌ನ ೩೬ ಸದಸ್ಯರು ಇರುವ ಕಾರ್ಯಕಾರಿ ಮಂಡಳಿಯು ನೀತಿ ನಿಯಮ ರೂಪಿಸುತ್ತದೆ. ಜೊತೆಗೆ ಯೋಜನೆಗಳಿಗೆ ಅನುಮೋದನೆ ಮತ್ತು ಆಡಳಿತಾತ್ಮಕ ಮತ್ತು ಹಣಕಾಸು ಯೋಜನೆಗಳ ಮಾರ್ಗದರ್ಶನ ಮತ್ತು ನಿರ್ವಹಣೆ ಮಾಡುತ್ತದೆ. ಕಾರ್ಯಕಾರಿ ಮಂಡಳಿಯು ಸರ್ಕಾರಗಳ ಪ್ರತಿನಿಧಿಗಳನ್ನು ಹೊಂದಿದ್ದು ವಿಶ್ವಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಮಂಡಳಿಯು ಇವರನ್ನು ಆಯ್ಕೆ ಮಾಡುತ್ತದೆ.

ಇದರ ಅವಧಿ ಮೂರು ವರ್ಷ. ಯುನಿಸೆಫ್ ಒಂದು ಸರಕಾರೇತರ ಸಂಸ್ಥೆಯಲ್ಲ (NGO). ಇದು ಅಂತರ ಸರಕಾರಗಳ ಸಂಘಟನೆ ಮತ್ತು ಆಯಾ ಸರಕಾರಗಳ ಜವಾಬ್ದಾರಿ ಸಂಸ್ಥೆಯಾಗಿರುತ್ತದೆ.

### ಯುನಿಸೆಫ್ ರಾಷ್ಟ್ರೀಯ ಸಮಿತಿಗಳು

ಜಗತ್ತಿನಾದ್ಯಂತ ೩೬ ಕೈಗಾರಿಕಾ ರಾಷ್ಟ್ರಗಳಲ್ಲಿ ಸಮಿತಿಗಳಿವೆ. ಇವುಗಳನ್ನು ಸ್ವತಂತ್ರ ಸ್ಥಳೀಯ ಸರಕಾರೇತರ ಸಂಸ್ಥೆಗಳಾಗಿ ಸ್ಥಾಪಿಸಲಾಗಿದೆ. ಈ ರಾಷ್ಟ್ರೀಯ ಸಮಿತಿಗಳು ಜನಪರವಾಗಿ ಸೇವೆ ಸಲ್ಲಿಸುತ್ತಿವೆ. ಯುನಿಸೆಫ್‌ನ ಧ್ಯೇಯಕ್ಕೆ ಬದ್ಧವಾಗಿವೆ. ಖಾಸಗಿ ವಲಯದಿಂದ ಧನ ಸಂಗ್ರಹಣೆ, ಮಕ್ಕಳ ಹಕ್ಕುಗಳ ಉತ್ತೇಜನ ಮತ್ತು ಬಡತನ, ಯುದ್ಧ ದುರಾಚಾರ, ದುರುಪಯೋಗದ ವಿರುದ್ಧ ಮಕ್ಕಳಿಗೆ ರಕ್ಷಣೆ ನೀಡುತ್ತಿವೆ.

ಐಚ್ಛಿಕ ಚಂದಾದಾರರು ಯುನಿಸೆಫ್‌ಗೆ ಧನ ನೀಡುತ್ತಾರೆ ಮತ್ತು ರಾಷ್ಟ್ರೀಯ ಸಮಿತಿಗಳು ಯನಿಸೆಫ್‌ನ ೧/೩ನೇ ವಾರ್ಷಿಕ ಆದಾಯ ಸಂಗ್ರಹಿಸುತ್ತವೆ. ಸಂಘ. ಸಂಸ್ಥೆಗಳ. ನಾಗರಿಕ ಸೊಸೈಟಿಗಳ ಮತ್ತು ಜಗತ್ತಿನಾದ್ಯಂತ ೬೦ ಲಕ್ಷಕ್ಕೂ ಹೆಚ್ಚು ವೈಯಕ್ತಿಕ ದಾನಿಗಳು ಉದಾರವಾಗಿ ಧನಸಹಾಯ ಮಾಡುತ್ತಿದ್ದಾರೆ. ಮಾಧ್ಯಮಗಳು, ರಾಷ್ಟ್ರ ಮತ್ತು ಸ್ಥಳೀಯ ಸರಕಾರಿ ಅಧಿಕಾರಿಗಳು ಸರಕಾರೇತರ ಸಂಸ್ಥೆಗಳ, ವೈದ್ಯರು, ನ್ಯಾಯವಾದಿಗಳು, ಶಾಲೆ, ಯುವಜನರು ಮತ್ತು ಸಾರ್ವಜನಿಕರು ಮಕ್ಕಳ ಹಕ್ಕುಗಳ ಬಗ್ಗೆ ಒಂದಾಗಿ ದನಿ ಎತ್ತುತ್ತಿದ್ದಾರೆ.

### ಭಾರತ ಮತ್ತು ಯುನಿಸೆಫ್

ಯುನಿಸೆಫ್ ಭಾರತದಲ್ಲಿ ೧೯೪೯ರಿಂದ ಕಾರ್ಯ ನಿರ್ವಹಿಸುತ್ತಿದೆ. ಇದು ಭಾರತದಲ್ಲಿರುವ ವಿಶ್ವಸಂಸ್ಥೆಯ ಅತಿದೊಡ್ಡ ಸಂಘಟನೆ. ಇದು ಭಾರತ ಸರಕಾರದೊಂದಿಗೆ ಕೆಲಸ ಮಾಡಲು ಸಂಪೂರ್ಣ ಬದ್ಧವಾಗಿದ್ದು ಈ ವಿಶಾಲ ದೇಶದಲ್ಲಿ ಹುಟ್ಟುವ ಪ್ರತಿ ಮಗುವಿಗೂ ಉತ್ತಮ ಜೀವನಾರಂಭ ಮತ್ತು ಅವರ ಸಂಪೂರ್ಣ ಸಾಮರ್ಥ್ಯ ವಿಕಾಸಗೊಳ್ಳಲು ಕಾರ್ಯ ನಿರ್ವಹಿಸುತ್ತಿದೆ.

ಯುನಿಸೆಫ್‌ನ ಎದುರು ದೊಡ್ಡ ಸವಾಲು ಇದ್ದರೂ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿದೆ. ಯುನಿಸೆಫ್ ಗುಣಮಟ್ಟದ ಸಂಶೋಧನೆ, ಮಾಹಿತಿಯಿಂದ ಮಕ್ಕಳ ಸಮಸ್ಯೆಗಳನ್ನು ಪರಿಹರಿಸಲು ನೂತನ ಕ್ರಿಯಾಶೀಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತದೆ. ಭಾರತದ ೧೩ ರಾಜ್ಯಗಳಲ್ಲಿ UNICEF ಕಛೇರಿಗಳ ಜಾಲವಿದೆ. ಇವುಗಳಿಂದ ಕಡುಬಡವರ ಮತ್ತು ದುರ್ಬಲ ವರ್ಗಗಳ ಮಹಿಳೆ ಮತ್ತು ಮಕ್ಕಳಿಗೆ ಮೂಲಭೂತ ಸೇವೆ ನೀಡಲು ಸಮುದಾಯದ ಜ್ಞಾನವನ್ನು ಬಳಸಿಕೊಳ್ಳುತ್ತದೆ. ಶುದ್ಧ ನೀರಿನ ಲಭ್ಯತೆ, ಆರೋಗ್ಯ ಸೇವೆ, ಶೈಕ್ಷಣಿಕ ಸೌಲಭ್ಯ ಸೇವೆಗಳ ಪ್ರತಿ ಕುಟುಂಬ ಮತ್ತು ಮಗುವಿಗೆ ನೀಡಲು ಪ್ರಯತ್ನಿಸುತ್ತಿದೆ. ಸೇವೆಗಳ ಗುಣಮಟ್ಟ ಉನ್ನತ ಮಟ್ಟದಾಗಿದೆ.

**ಭಾರತ ಸರಕಾರ ಯುನಿಸೆಫ್ ಸಹಕಾರ ಯೋಜನೆಗಳು**

ಸರಕಾರದ ಯೋಜನೆಗಳ ಸಹಯೋಗದಿಂದ ಸಾಧಿಸಿದ ಪ್ರಮುಖ ಸಾಧನೆಗಳು (೨೦೦೩-೨೦೦೭)

ಮನೆಗಳಲ್ಲಿ ಐಯೋಡಿನ್‌ಯುಕ್ತ ಉಪ್ಪಿನ ಬಳಕೆಯಲ್ಲಿ ಹೆಚ್ಚಳ.

ಶೇಕಡ ೬೫ರಷ್ಟು ಶಾಲೆಗಳಿಗೆ ನೀರು ಮತ್ತು ಶೌಚಾಲಯ ಪೂರೈಕೆ.

ಶೇಕಡ ೭೫ರಷ್ಟು ಸರಕಾರಿ ಶಾಲೆಗಳ ಪ್ರೌಢರಿಗೆ HIV/ಏಡ್ಸ್ ತಡೆ ಕುರಿತ ಶಿಕ್ಷಣ.

ಗೃಹ ನೈರ್ಮಲ್ಯೀಕರಣದಲ್ಲಿ ಹೆಚ್ಚು ಸಾಧನೆ.

ನವಜಾತ ಶಿಶು ಮತ್ತು ಮಕ್ಕಳ ಸಮಗ್ರ ನಿರ್ವಹಣೆಯ ಅಳವಡಿಕೆ.

**೨೦೦೮-೨೦೧೨ ಕಾರ್ಯಕ್ರಮಗಳು**

ಯೋಜನೆಯ ಒಟ್ಟಾರೆ ಗುರಿಯೆಂದರೆ ಭಾರತದಲ್ಲಿ ಮಹಿಳೆ ಮತ್ತು ಮಕ್ಕಳ ಬದುಕುವ, ಅಭಿವೃದ್ಧಿಯಾಗುವ, ಪಾಲ್ಗೊಳ್ಳುವ ಹಕ್ಕುಗಳ ಪೂರೈಕೆ ಮತ್ತು ಲಿಂಗ, ಜಾತಿ, ಜನಾಂಗ ಅಥವಾ ಪ್ರದೇಶ ಆಧಾರಿತ ಸಾಮಾಜಿಕ ಅಸಮಾನತೆಯನ್ನು ಕಡಿಮೆ ಮಾಡುವುದು.

**೧. ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಯೋಜನೆ.**

* ಪ್ರತಿ ಸಾವಿರ ಜನಗಳಿಗೆ ಶಿಶು ಮರಣ ದರವನ್ನು ೫೮ರಿಂದ ೨೮ಕ್ಕೆ ಇಳಿಸುವುದು.

* ಪ್ರತಿ ೧,೦೦.೦೦೦ ಹೆರಿಗೆಗಳಲ್ಲಿ ತಾಯಂದಿರ ಮರಣ ದರವನ್ನು ೩೦೧ರಿಂದ ೧೦೦ಕ್ಕೆ ಇಳಿಸುವುದು.

**೨. ಶಿಶು ಅಭಿವೃದ್ಧಿ ಮತ್ತು ಆಹಾರ ಯೋಜನೆ**

* ಅಪೌಷ್ಟಿಕತೆಯ ಮಟ್ಟವನ್ನು ಕಡಿಮೆ ಮಾಡುವುದು.

* ಸೂಕ್ಷ್ಮ ಪೋಷಕಾಂಶಗಳ ಕೊರತೆಯಲ್ಲಿ ಇಳಿಕೆ.

**೩. ಮಕ್ಕಳ ಪರಿಸರ**

* ಶುದ್ಧ ಮತ್ತು ಸುರಕ್ಷಿತ ಕುಡಿಯುವ ನೀರಿನ ನಿರಂತರ ಲಭ್ಯತೆ ಮತ್ತು ಮೂಲ ನೈರ್ಮಲ್ಯ ಸೇವೆಗಳು.

೪. ಮಕ್ಕಳ ರಕ್ಷಣೆ

* ಮಕ್ಕಳ ಕಾಳಜಿ ಮತ್ತು ರಕ್ಷಣೆಗೆ ಅಗತ್ಯವಾದ ನಿಯಮ, ಹಣಕಾಸು, ಕಾನೂನು ನಿರ್ದೇಶನಗಳ ಬಲವರ್ಧನೆ.

* ರಾಜ್ಯ ಮಟ್ಟದಲ್ಲಿ ಮಕ್ಕಳ ರಕ್ಷಣಾ ಘಟಕಗಳ ಸ್ಥಾಪನೆ

೫. ಶಿಕ್ಷಣ

* ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ನೋಂದಣಿ ಹೆಚ್ಚಳ, ಉಳಿಯುವಿಕೆ ಮತ್ತು ಪ್ರಾಥಮಿಕ ಶಿಕ್ಷಣವನ್ನು ಮುಗಿಸುವುದು.

೬. ಮಕ್ಕಳು ಮತ್ತು ಏಡ್ಸ್

* ಎಲ್ಲ ಸರಕಾರಿ ಪ್ರೌಢಶಾಲೆಗಳ ಪಠ್ಯ ಮತ್ತು ಪಾಠಗಳಲ್ಲಿ HIV/ಏಡ್ಸ್ ತಡೆಗಟ್ಟುವ ಕುರಿತು ಶಿಕ್ಷಣ ನೀಡುವುದು.

* HIV/ಏಡ್ಸ್ ಕುರಿತ ಸರಿಯಾದ ಜ್ಞಾನ ಮತ್ತು ಅಪಾಯ ಕಡಿಮೆ ಮಾಡುವ ಕುರಿತು ಶಾಲೆಯಿಂದ ಹೊರಗಿರುವ ೭೦ ದಶಲಕ್ಷ ಯುವಕರಿಗೆ ರಾಷ್ಟ್ರ ಮಟ್ಟದಲ್ಲಿ ಮಾಹಿತಿ ಒದಗಿಸುವುದು.

* HIV ಬಾಧಿತ ಶೇ. ೪೦ ಗರ್ಭಿಣಿಯರಿಗೆ PPTCT ಸೇವೆ HIV+ve ಮಕ್ಕಳಿಗೆ ಅಗತ್ಯ ಕಾಳಜಿ ಮತ್ತು ಚಿಕಿತ್ಸೆ.

* ಶೇ.೯೦ರಷ್ಟು ಅಪಾಯದ ಅಂಚಿನಲ್ಲಿರುವ ಯುವಕರಿಗೆ ಸಮಗ್ರ HIV ತಡೆ ಸೇವೆ.

**ಯುನಿಸೆಫ್ ಸದ್ಭಾವನಾ ರಾಯಭಾರಿಗಳು**

ಜನರಲ್ಲಿ ಯುನಿಸೆಫ್ ಯೋಜನೆಗಳ ಕುರಿತು ಅರಿವು ಮೂಡಿಸಲು ಖ್ಯಾತ ವ್ಯಕ್ತಿಗಳನ್ನು ರಾಯಭಾರಿಗಳನ್ನಾಗಿ ಮಾಡುತ್ತಾರೆ. ಅವರು ಅಂತಾರಾಷ್ಟ್ರೀಯ, ಪ್ರಾದೇಶಿಕ ಮತ್ತು ರಾಷ್ಟ್ರ ಮಟ್ಟದ ರಾಯಭಾರಿಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಪ್ರಖ್ಯಾತ ನಟ ಅಮಿತಾಬ್ ಬಚ್ಚನ್ ೨೦೦೫ರಲ್ಲಿ ರಾಯಭಾರಿಯಾಗಿದ್ದರು, ೨೦೦೯ರ ರಾಯಭಾರಿಗಳೆಂದರೆ ಲೀಚಾಂಗವೆ, ಜಸ್ಟಿನ ಹೆನಿನ ಮತ್ತು ತುರಲ್ಯಾಂಡೊ ಬಲ್ಲುಮೆ.

**೨.೨. ಅಂಗನವಾಡಿ ಮತ್ತು ಅದರ ಕೆಲಸ ಕಾರ್ಯಗಳು**

**ಸಮಗ್ರ ಸೇವೆಗಳು**

ಮಗು ಜನಿಸಿದ ನಂತರ ದಿನಗಳಲ್ಲಿ ಆಗುವ ಮಗುವಿನ ಶಾರೀರಿಕ, ಮಾನಸಿಕ ಹಾಗೂ ಸಾಮಾಜಿಕ, ಬೆಳವಣಿಗೆಯು ಮಗುವಿನ ಮುಂದಿನ ಬೆಳವಣಿಗೆಯಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತದೆ. ಆಗ ಮಗುವಿಗೆ ಒದಗಿಸಿದ ಸೇವೆಗಳ ಅತ್ಯಂತ ಮುಖ್ಯವಾಗಿವೆ. ಆಹಾರ, ಪೋಷಣೆ, ಆರೋಗ್ಯ ಮತ್ತು ಶಿಕ್ಷಣ ಮುಂತಾದ ಮುಖ್ಯ ಅಗತ್ಯ, ಸೇವೆಗಳನ್ನು ತಾಯಿ ಮತ್ತು ಮಗು ಇಬ್ಬರಿಗೂ ಏಕಕಾಲದಲ್ಲಿ ಅವರ ಗ್ರಾಮದಲ್ಲೇ ಅಥವಾ ಆಯಾ ವಿಭಾಗದಲ್ಲೇ ಒದಗಿಸಬೇಕು.

## ಸಮಗ್ರ ಶಿಶು ಅಭಿವೃದ್ಧಿ ಸೇವಾ ಕಾರ್ಯಕ್ರಮದ ಉದ್ದೇಶ

೧. ೦ ಯಿಂದ ೬ ವರ್ಷ ವಯೋಮಿತಿಯ ಮಕ್ಕಳ ಪೌಷ್ಟಿಕ ಆಹಾರ ಮತು ಆರೋಗ್ಯ ಸ್ಥಿತಿಗಳನ್ನು ಉತ್ತಮವಡಿಸುವುದು.

೨. ಮಗುವಿನ ಮಾನಸಿಕ, ಶಾರೀರಿಕ, ದೈಹಿಕ, ಹಾಗೂ ಸಾಮಾಜಿಕ ಬೆಳವಣಿಗೆಗೆ ಸೂಕ್ತವಾದ ತಳಪಾಯ ಹಾಕುವುದು.

೩. ಮರಣ, ಅನಾರೋಗ್ಯ, ಸೂಕ್ತಪೋಷಣೆ ಮತ್ತು ಶಾಲೆ ಬಿಡುವಿಕೆ ಇವುಗಳ ಸಂಖ್ಯೆಯನ್ನು ಕಡಿಮೆಗೊಳಿಸುವುದು.

೪. ಮಕ್ಕಳ ಅಭಿವೃದ್ಧಿಗೆ ಉತ್ತೇಜನ ನೀಡುವ ವಿಚಾರದಲ್ಲಿ ವಿವಿಧ ಇಲಾಖೆಗಳ ನಡುವೆ ಕಾರ್ಯ ನೀತಿ ಮತ್ತು ಅನುಷ್ಠಾನದಲ್ಲಿ ಪರಿಣಾಮಕಾರಿ ಸಮನ್ವಯವನ್ನು ತರುವುದು.

೫. ಆರೋಗ್ಯ ಮತ್ತು ಪೌಷ್ಟಿಕತೆಯ ಮಟ್ಟವನ್ನು ಹೆಚ್ಚಿಸಲು ಆರೋಗ್ಯ ಶಿಕ್ಷಣ ನೀಡುವ ಮೂಲಕ ಮಗುವಿನ ಸಾಮಾನ್ಯ ಮತ್ತು ಪೌಷ್ಠಿಕಾಂಶಗಳ ಅಗತ್ಯಗಳನ್ನು ನೋಡಿಕೊಳ್ಳಲು ತಾಯಿಯ ತಿಳುವಳಿಕೆಯನ್ನು ಹೆಚ್ಚಿಸುವುದು.

## ಸೇವಾ ಸೌಲಭ್ಯಗಳು

ಸಮಗ್ರ ಶಿಶು ಅಭಿವೃದ್ಧಿ ಸೇವಾ ಕಾರ್ಯಕ್ರಮದಲ್ಲಿ ಮಕ್ಕಳಿಗೆ ಮತ್ತು ತಾಯಂದಿರಿಗೆ ಒದಗಿಸುವ ವಿವಿಧ ಸೇವೆಗಳ ವ್ಯಾಪ್ತಿಯಲ್ಲಿ ಪೂರಕ ಪೌಷ್ಟಿಕ ಆಹಾರ, ಆರೋಗ್ಯ ತಪಾಸಣೆ, ಮಾಹಿತಿ ಸೇವೆಗಳು, ರೋಗ ನಿರೋಧಕ ಚುಚ್ಚುಮದ್ದು, ಪೌಷ್ಟಿಕ ಆಹಾರ ಮತ್ತು ಆರೋಗ್ಯ ಶಿಕ್ಷಣ, ರೂಢಿಗತವಲ್ಲದ ಶಾಲಾಪೂರ್ವ ಶಿಕ್ಷಣ ಇವು ಒಳಗೊಂಡಿರುತ್ತದೆ.

## ಅಂಗನವಾಡಿ ಕಾರ್ಯಕಲಾಪಗಳು

ಸಿ.ಡಿ.ಪಿ.ಓ ಇವರು ಇಲಾಖೆಯ ಮುಖ್ಯ ಅಧಿಕಾರಿಗಳು, ತಾಲೂಕಿನ ಸಮಗ್ರ ಕಾರ್ಯಕಲಾಪಗಳೆಲ್ಲವೂ. ಇವರ ಮೂಲಕವೇ ಅಸ್ತಿತ್ವವನ್ನು ಪಡೆಯುತ್ತವೆ.

ಕುಟುಂಬ ಕಲ್ಯಾಣ ಯೋಜನೆ, ಸಾಕ್ಷರತಾ ಯೋಜನೆ ಹಾಗೂ ಇತರೇ ಪ್ರಚಲಿತ ಯೋಜನೆಗಳು ಅಸ್ತಿತ್ವದಲ್ಲಿ ಬರಲು ಇವರು ಯಾವ ರೀತಿ ಕಾರ್ಯ ನಿರ್ವಹಿಸಬೇಕು. ಮಗುವಿನ ಜನನ ಪೂರ್ವ ಮತ್ತು ನಂತರ ಯಾವ ರೀತಿ ಮಗುವಿನ ಪಾಲನೆ ಪೋಷಣೆ ರಕ್ಷಣೆಯನ್ನು ನೀಡಬೇಕು. ಆಹಾರವನ್ನು ತೆಗೆದು ಸೇವಿಸಬೇಕು. ಯಾವ ಪ್ರಮಾಣದಲ್ಲಿ ಆಹಾರವನ್ನು ತೆಗೆದುಕೊಳ್ಳಬೇಕು ಹಾಗೂ ತಾಯಂದಿರಿಗೆ ಮಕ್ಕಳ ಆರೋಗ್ಯ ಆಹಾರ ಬಗೆಗೆ ಯಾವ ರೀತಿ ಶಿಕ್ಷಣ ನೀಡಬೇಕು.

ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರನ್ನು ಸೇರಿಸುವುದುಯ ಅವರಲ್ಲಿ ಉತ್ಸಾಹ ಮೂಡಿಸಿ ಹೊಸ ಹೊಸ ಕಾರ್ಯಗಳನ್ನು ಅದರಿಂದ ಮಾಡಿಸಿ ಅವರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಕೂಡಾ ಮುಂದುವರೆಯುವಂತೆ ಪ್ರೋತ್ಸಾಹಿಸುವುದು. ಪುರುಷರಂತೆ ಸಮಾಜದಲ್ಲಿ ಸಮಾನ ಸ್ಥಾನಮಾನ

ಪಡೆಯುವಂತೆ ಗೃಹಕೈಗಾರಿಕೆಗಳನ್ನು ನಡೆಸಲು ಅವಶ್ಯವಿರುವ ವಸ್ತುಗಳನ್ನು ಸರ್ಕಾರದ ಮೂಲಕ ನೀಡಿ ಅವರು ಸ್ವಾವಲಂಬಿ ಜೀವನವನ್ನು ನಡೆಸುವಂತೆ ಮಾಡುವುದು.

ಜಿಲ್ಲೆಯ ಜನರಿಗೆ ಸರಿಯಾದ ಆರೋಗ್ಯ ಲಾಭ ದೊರತಿವೆಯೇ ಇಲ್ಲವೇ ಎಂಬುದನ್ನು ಮೇಲಿಂದ ಮೇಲೆ ಭೇಟಿ ಮಾಡಿ ನೀಡಿ ತಿಳಿದುಕೊಳ್ಳುತ್ತಾರೆ ಹಾಗೂ ಅವರಿಗೆ ಯಾವ ರೀತಿಯ ವ್ಯವಸ್ಥೆ ಬೇಕಾಗಿದೆ ಎಂಬುದನ್ನು ಕೂಡ ಇವರು ನೋಡಬೇಕಾಗುತ್ತದೆ.

ಪ್ರತಿ ವಾರಕ್ಕೊಮ್ಮೆ ಮೇಲ್ವಿಚಾರಕ ಸಭೆಯನ್ನು ಕರೆದು ಅವರು ವಾರಕ್ಕೊಮ್ಮೆ ಹಾಕಿಕೊಳ್ಳುವ ಅಂಗನವಾಡಿ ಕುಟುಂಬ ಯೋಜನೆ ಸಾಕ್ಷರತಾ ಇತರೇ ಯಾವುದೇ ಯೋಜನೆಗಳು ಎಷ್ಟು ಯಶಸ್ವಿಯಾಗಿವೆ ಅಥವಾ ಅವುಗಳ ಸುಧಾರಣೆಗಾಗಿ ಇತರೇ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ವಿಚಾರಿಸಲಾಗುವುದು. ಈ ಕೇಂದ್ರದಲ್ಲಿ ಪ್ರತಿ ಮಂಗಳವಾರ ಈ ಸಭೆಯನ್ನು ಕರೆಯುವರು.

ಪ್ರತಿ ತಿಂಗಳಿಗೊಮ್ಮೆ ಮೇಲ್ವಿಚಾರಿಕೆಯರು ತಮ್ಮ ಕೇಂದ್ರದ ಅಂಗನವಾಡಿ ಕಾರ್ಯಕರ್ತೆಯರ ಸಭೆಯನ್ನು ಕರೆಯುವರು. ಅಲ್ಲಿ ಅವರಿಗೆ ಹಿಂದಿನ ತಿಂಗಳಿನ ವರದಿಯನ್ನು ಒಪ್ಪಿಸಿ ಮುಂಬರುವ ತಿಂಗಳಿನ ವೇಳಾ ಪಟ್ಟಿಯನ್ನು ಕುರಿತು ಹೇಳಲಾಗುವುದು. ಒಂದು ತಿಂಗಳಿನಲ್ಲಿ ತಮ್ಮಲ್ಲಿ ಎಷ್ಟು ಮಕ್ಕಳಿಗೆ ಲಸಿಕೆಯನ್ನು ಮತ್ತು ಯಾವ ಯಾವ ಚುಚ್ಚುಮದ್ದನ್ನು ನೀಡಲಾಗಿದೆ ಮತ್ತು ಎಷ್ಟು ಗರ್ಭಿಣಿ ಸ್ತ್ರೀಯರು ಇದರ ಉಪಯೋಗವನ್ನು ಪಡೆದಿರುವರು, ಅದರಲ್ಲಿ ಕೇಂದ್ರದಿಂದ ಆಹಾರ ಪಡೆಯುವ ಮಕ್ಕಳ ಆಹಾರ ಪ್ರಮಾಣ ಈ ಎಲ್ಲ ವರದಿಯನ್ನು ಅವರು ನೀಡಬೇಕಾಗುತ್ತದೆ.

ಈ ರೀತಿ ಕಾರ್ಯಕರ್ತೆಯರಿಂದ ಮೇಲ್ವಿಚಾರಕರು, ಸಿ.ಡಿ.ಪಿ.ಓಗಳು ಸಂಪೂರ್ಣ ವರದಿ ಪಡೆದು ಸರಕಾರಕ್ಕೆ ಕಳಿಸಿಕೊಡುವರು, ಇವರು ಮೇಲಿಂದ ಮೇಲೆ ಭೇಟಿಯನ್ನು ನೀಡಲು ಅನುಕೂಲವಾಗಲೆಂದು ಸರ್ಕಾರವು ವಾಹನ ವ್ಯವಸ್ಥೆ ನೀಡಿರುವುದು. ಮೂರು ತಿಂಗಳಿಗೊಮ್ಮೆ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳನ್ನು ಸಿ.ಡಿ.ಪಿ.ಓ. ತಮ್ಮೊಂದಿಗೆ ಪರಿವೀಕ್ಷಣೆಗೆ ಕರೆದುಕೊಂಡು ಹೋಗುವರು. ಒಂದು ವೇಳೆ ಅಲ್ಲಿಯ ಕಾರ್ಯಕರ್ತೆಯರಾಗಲೀ ಅಥವಾ ಆ ಕೇಂದ್ರದ ಮೇಲ್ವಿಚಾರಕರಾಗಲೀ ಸುಳ್ಳು ಹೇಳಿದರೆ ಅಥವಾ ಕರ್ತವ್ಯದ ತಪ್ಪು ತಡೆ ಮಾಡಿದ್ದರೆ ಅವರಿಗೆ ಮೆಮೊ ಕಳಿಸುವ ಅಧಿಕಾರವನ್ನು ಸಿ.ಡಿ.ಪಿ.ಓ ಹೊಂದಿರುವರು. ಈ ರೀತಿಯ ಭೇಟಿಯ ವೇಳೆಯನ್ನು ಮೊದಲೇ ಜಿಲ್ಲಾ ತಾಲೂಕು ಸಭೆಯಲ್ಲಿ ಸಿ.ಡಿ.ಪಿ.ಓ. ದಿನಾಂಕವನ್ನು ನಿರ್ಧರಿಸಿ ವೈದ್ಯಾಧಿಕಾರಿಗಳಿಗೆ ತಿಳಿಸುವರು.

ವರ್ಷಕ್ಕೆ ೨ ಅಥವಾ ಅವಶ್ಯವಿದ್ದರೆ ಮೂರು ಸಾರಿ ಜಿಲ್ಲಾ ತಾಲೂಕು ಪಂಚಾಯತ್ ಸಭೆಯನ್ನು ಕರೆಯುವರು. ಇಲ್ಲಿ ಅಂಗನವಾಡಿಗಳ ನಿರ್ಮಾಣ ಅಥವಾ ಯಾವುದಾದರೂ ಕಟ್ಟಡ ಸೋರುತ್ತಿದ್ದರೆ ರಿಪೇರಿ ಮಾಡುವ ವಿಷಯ ಕುರಿತು ಪಟ್ಟಿ ತಯಾರಿಸುವರು.

ಸರಕಾರ ಪ್ರತಿವರ್ಷ ಒಂದೊಂದು ಹೊಸ ಯೋಜನೆಗಳನ್ನು ಈ ಕೇಂದ್ರಕ್ಕೆ ನೀಡುತ್ತದೆ ಅದನ್ನು ಯಶಸ್ವಿಯಾಗಿ ಜಾರಿಯಲ್ಲಿ ತರುವುದು ಇದರ ಕರ್ತವ್ಯವಾಗಿದೆ. ಈ ರೀತಿ ಒಂದೊಂದು ತಾಲೂಕಿನ

ಒಬ್ಬ ಸಿ.ಡಿ.ಪಿ.ಓ. ಇದ್ದು ಅವರು ಆ ತಾಲೂಕಿನಲ್ಲಿರುವ ಎಲ್ಲ ಹಳ್ಳಿಗಳು ಕ್ಷೇಮ ಸಮಾಚಾರವನ್ನು ನೋಡಬೇಕಾಗುತ್ತದೆ.

ಗ್ರಾಮೀಣ ಪ್ರದೇಶದ ಯಾವುದಾದರೂ ಹಣದ ನೆರವು ಬೇಕಾಗಿದ್ದರೆ ಅಥವಾ ಗೃಹ ಕೈಗಾರಿಕೆಗಳನ್ನು ಮಾಡಲು ಹೆಣ್ಣು ಮಕ್ಕಳು ಮಾತ್ರ ಅಂಥವರ ಹೆಸರನ್ನು ನೋಂದಾಯಿಸಿಕೊಂಡು ಅವರಿಗೆ ಸರಕಾರದಿಂದ ಸಾಲ ಬೇಕಾಗಿದ್ದರೆ ಅದನ್ನು ಕೊಡಿಸಿಕೊಡಲಾಗುವುದು. ಸ್ತ್ರೀಯರ ಒಳಿತನ್ನು ಈ ಸಂಸ್ಥೆ ಬಯಸುತ್ತದೆ ಎಂದು ಹೇಳಬಹುದು.

ಅಂಗವಿಕಲರಾಗಿದ್ದು ಅವರ ವಾರ್ಷಿಕ ಆದಾಯ ೮.೦೦೦/ ಇದ್ದರೆ ಅಂಥವರಿಗೂ ಕೂಡ ಆರ್ಥಿಕ ಸಹಾಯ ನೀಡುವರು.

ಪ್ರತಿ ತಿಂಗಳು ೪ನೇ ತಾರೀಕಿನಂದು ಸಹಾಯಕ ನಿರ್ದೇಶಕರು(ಎ.ಡಿ,) ಸಿ.ಡಿ.ಪಿ.ಓ. ಮತ್ತು ಮೇಲ್ವಿಚಾರಕರ ಸಭೆ ಕರೆಯುವರು. ಅಲ್ಲಿ ಅಭಿವೃದ್ಧಿ ಯೋಜನೆಗಳಾದ ಕುಟುಂಬ ಯೋಜನೆ, ಚುಚ್ಚುಮದ್ದು ಶಿಬಿರ, ಪೌಷ್ಟಿಕ ಆಹಾರ, ಶಿಬಿರದ ಕಾರ್ಯಕಲಾಪಗಳು ಮತ್ತು ಅವುಗಳಲ್ಲಿ ಏನಾದರೂ ಸಮಸ್ಯೆಗಳು ಕಂಡುಬಂದಿದ್ದರೆ ಅಂಥ ವಿಷಯಗಳ ಬಗೆಗೆ ಚರ್ಚಿಸಲಾಗುವುದು.

### ೨.೩. ಅಂಗನವಾಡಿ ಮಟ್ಟದಲ್ಲಿ ದಾಖಲೆಗಳು ಮತ್ತು ರಿಜಿಷ್ಟರುಗಳು

೧. ಸರ್ವೆ ರಿಜಿಸ್ಟರ್

೨. ಫಲಾನುಭವಿಗಳ ದಾಖಲಾತಿ ರಿಜಿಸ್ಟರ್

೩. ಸಿಬ್ಬಂದಿ ಹಾಜರಾತಿ ರಿಜಿಸ್ಟರ್

೪. ಆಹಾರ, ಸಾಮಗ್ರಿಗಳ ದಾಸ್ತಾನು ಮತ್ತು ವಿತರಣಾ ರಿಜಿಸ್ಟರ್

೫. ರೋಗ ನಿರೋಧಕ ಚುಚ್ಚುಮದ್ದಿನ ರಿಜಿಸ್ಟರ್

೬. ಗರ್ಭಿಣಿ, ಬಾಣಂತಿಯ ದಾಖಲಾತಿ ರಿಜಿಸ್ಟರ್.

೭. ಜನನ-ಮರಣ ರಿಜಿಸ್ಟರ್.

೮. ಆರೋಗ್ಯ ತಪಾಸಣೆ ರಿಜಿಸ್ಟರ್.

೯. ಮಾಹಿತಿ ಸೇವೆ ರಿಜಿಸ್ಟರ್.

೧೦. ದಿನಚರಿ ಮತ್ತು ರಿಜಿಸ್ಟರ್.

೧೧. ಸಂದರ್ಶಕರ ಪುಸ್ತಕ.

೧೨. ಔಷಧಿ ದಾಸ್ತಾನು ಮತ್ತು ವಿತರಣಾ ರಿಜಿಸ್ಟರ್.

೧೩. ಸ್ಥಿರ ವಸ್ತುಗಳ ದಾಸ್ತಾನು ಮತ್ತು ವಿತರಣಾ ರಿಜಿಸ್ಟರ್.

೧೪. ಸಲಹಾ ಸಮಿತಿ ಮತ್ತು ಪೋಷಕರ ರಿಜಿಸ್ಟರ್.

೧೫. ನ್ಯೂನ ಪೋಷಣೆಯ ಮಕ್ಕಳ ದಾಖಲಾತಿ ರಿಜಿಸ್ಟರ್.

೧೬. ತಾಯಂದಿರ ಸಭೆ ಮತ್ತು ಪೌಷ್ಟಿಕ ಆಹಾರ ಪ್ರತ್ಯಕ್ಷತೆ ರಿಜಿಸ್ಟರ್.

**ಶಿಶು ಅಭಿವೃದ್ಧಿ ಯೋಜನೆಯ ಹಣದ ವ್ಯವಸ್ಥೆ**

| ಕೇಂದ್ರ ಸರಕಾರ | ರಾಜ್ಯಸರಕಾರ |
|---|---|
| ೧. ಅಂಗನವಾಡಿ ಕಾರ್ಯಕರ್ತೆಯರಿಗೆ ಗೌರವಧನ ನೀಡುವುದು.<br>೨. ವರ್ಷಕ್ಕೆ ಮಾರ್ಚ್ ತಿಂಗಳಿನಲ್ಲಿ ೨೫% ಹಣವನ್ನು ನಿಯೋಗಕ್ಕೆ | ೧. ಸಿಬ್ಬಂದಿ ವರ್ಗದವರ ಸಂಬಳವನ್ನು ಕೊಡುವುದು. ಸಂಪೂರ್ಣ ಸಂಬಳ<br>೨. ಬಜೆಟ್‌ನ ಆಧಾರದ ಮೇಲೆ ಫುಡ್ ತೆಗೆದುಕೊಡುವುದು.<br>ಉದಾ: ೭೫%ರಿಂದ ೧೦೦ರವರೆಗೆ |

ಐ.ಸಿ.ಡಿ.ಎಸ್. ಆಡಳಿತ ವ್ಯವಸ್ಥೆ ಕೇಂದ್ರ ಮಟ್ಟದ ಕಾರ್ಯಾಲಯಗಳು

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ರಾಜ್ಯ ಮಟ್ಟದ ಕಾರ್ಯಾಲಯಗಳು**

೧. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆ ನಿರ್ದೇಶಕರು

(ರಾಜ್ಯ ಸಮನ್ವಯಾಧಿಕಾರ)

೨. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

(ಜಂಟಿ ನಿರ್ದೇಶಕರು ಸ.ಬಾ.ವಿಯೋ) ರಾಜ್ಯ ಘಟಕ

**ಜಿಲ್ಲಾ ಮಟ್ಟದ ಕಾರ್ಯಾಲಯಗಳು**

೧. ಜಿಲ್ಲಾ ಆರೋಗ್ಯ ಮತ್ತು ಕಲ್ಯಾಣಾಧಿಕಾರಿಗಳು (ಡಿ.ಎಚ್.ಓ)

**ಜಿಲ್ಲಾ ಮುಖ್ಯ ಸಲಹೆಗಾರರು**

೨. ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಇಲಾಖೆ ನಿರೂಪಣಾಧಿಕಾರಿ (ಸ.ಬಾ.ವಿ.ಯೊ. ಜಿಲ್ಲಾ ಘಟಕ)

**ಕ್ಷೇತ್ರ ಮಟ್ಟದ ಕಾರ್ಯಾಲಯಗಳು**

ವೈದ್ಯಾಧಿಕಾರಿಗಳು ಜಿಲ್ಲಾ ಸಲಹೆಗಾರರು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಹಾಯಕ ಅಭಿವೃದ್ಧಿ ಯೋಜನಾಧಿಕಾರಿಗಳ ಸಮಗ್ರ ಬಾಲ ವಿಕಾಸ ಯೋಜನೆ.

ಹಿರಿಯ ಆರೋಗ್ಯ ಸಹಾಯಕಿ (ಎಲ್.ಎಚ್.ವಿ) ಮೇಲ್ವಿಚಾರಕರು ವೃತ್ತಾ ಮಟ್ಟದಲ್ಲಿ.

ಗ್ರಾಮಮಟ್ಟ / ಉಪಕೇಂದ್ರ ಮಟ್ಟ

ಕಿರಿಯ ಮಹಿಳಾ ಆರೋಗ್ಯ ಸಹಾಯಕಿ: ಅಂಗನವಾಡಿ ಕಾರ್ಯಕರ್ತೆಯರ (ಎ.ಎನ್.ಎಮ್) ಗ್ರಾಮಮಟ್ಟ ಆರೋಗ್ಯ ಮಾರ್ಗದರ್ಶಿ ಸಮುದಾಯ



ಜಂಟಿ ನಿರ್ದೇಶಕರು (ಪಿ.ಡಿ.ಎಂ.ಘಟಕ)
ಉಪ ನಿರ್ದೇಶಕರು (ಸುಧಾರಣೆ)
ಉಪ ನಿರ್ದೇಶಕರು (ತನಿಖೆ)
ಉಪ ನಿರ್ದೇಶಕರು (ಮಹಿಳಾ ಕಲ್ಯಾಣ)
ಕ್ಷೇತ್ರಾಧಿಕಾರಿಗಳು
ಸಹಾಯಕ ನಿರ್ದೇಶಕರು (ತನಿಖೆ)
ಸಹಾಯಕ ನಿರ್ದೇಶಕರು (ಮಹಿಳಾ ಕಲ್ಯಾಣ)
ಸಹಾಯಕ ನಿರ್ದೇಶಕರು (ವಿಶೇಷ ಘಟಕ)
ಸಹಾಯಕ ನಿರ್ದೇಶಕರು (ದತ್ತ ಕೋಶ)
ಸಂಶೋಧನಾ ಅಧಿಕಾರಿ -2
ಸಂಶೋಧನಾ ಅಧಿಕಾರಿ -1
ಕಾನೂನು ಸಲಹೆಗಾರರು




ಶಿಶು ಅಭಿವೃದ್ಧಿ ಯೋಜನಾ ವಿಭಾಗ ಜಂಟಿ ನಿರ್ದೇಶಕರು
ಉಪ ನಿರ್ದೇಶಕರು (ತರಬೇತಿ)
ಉಪ ನಿರ್ದೇಶಕರು (ಮಹಿಳಾ ಕಲ್ಯಾಣ)
ಸಹಾಯಕ ನಿರ್ದೇಶಕರು (ಐ.ಸಿ.ಡಿ.ಎಸ್)
ಸಹಾಯಕ ನಿರ್ದೇಶಕರು (ಆರೋಗ್ಯ)
ಸಹಾಯಕ ನಿರ್ದೇಶಕರು (ಉಸ್ತುವಾರಿ)
ಸಹಾಯಕ ನಿರ್ದೇಶಕರು (ಮಕ್ಕಳ ಕಲ್ಯಾಣ)


ಇಲಾಖಾ ರಚನೆ (ಜಿಲ್ಲಾ ಮಟ್ಟದಲ್ಲಿ)
ಉಪ ನಿರ್ದೇಶಕರು (27)
ಮಹಿಳಾ ಮತ್ತು ಮಕ್ಕಳ ಕಲ್ಯಾಣಾಧಿಕಾರಿಗಳು (27)
ಸಹಾಯಕ ನಿರ್ದೇಶಕರು (ದತ್ತ ಕೋಶ)
ಸಂಸ್ಥೆಯ ಮುಖ್ಯಸ್ಥರು (77)
ಪರಿವೀಕ್ಷಣಾಧಿಕಾರಿಗಳು ಪಿ.ಒ.ಆಕ್ಟ್ (27)
ಬಾಲಸೇವಾ ಸಂಸ್ಥೆ (9)
ಶಿಶು ಅಭಿವೃದ್ಧಿ ಯೋಜನಾ ಅಧಿಕಾರಿಗಳು 185 ತಾಲ್ಲೂಕುಗಳು


೨.೪. ಇಲಾಖಾ ರಚನೆ
ತಾಲ್ಲೂಕು ಮಟ್ಟದಲ್ಲಿ
ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು
೧೮೫
ಸಹಾಯಕ ಶಿಶು ಅಭಿವೃದ್ಧಿ ಯೊಜನಾಧಿಕಾರಿಗಳು
೨೧೯
ಮೇಲ್ವಿಚಾರಕಿಯರು
೧೮೭೫
ಅಂಗನವಾಡಿ ಕಾರ್ಯಕರ್ತೆಯರು
೫೧೬೧೪
ಅಂಗನವಾಡಿ ಸಹಾಯಕಿಯರು
೫೧೬೧೪

**ಸ್ತ್ರೀಶಕ್ತಿ ವಿಭಾಗ**

ಯೋಜನಾ ನಿರ್ದೇಶಕರು

ಯೋಜನಾಧಿಕಾರಿಗಳು ಯೋಜನಾಧಿಕಾರಿಗಳು

ಆಡಳಿತ ತರಬೇತಿ

ಸಹಾಯಕ ಯೋಜನಾಧಿಕಾರಿಗಳು

ಅಧೀಕ್ಷಕರು

ಪ್ರಥಮ ದರ್ಜೆ ಸಹಾಯಕರು

ದ್ವಿತೀಯ ದರ್ಜೆ ಸಹಾಯಕರು

**ಆಡಳಿತ ವಿಭಾಗ**

ಜಂಟಿ ನಿರ್ದೇಶಕರು

ಸಹಾಯಕ ನಿರ್ದೇಶಕರು, ಲೆಕ್ಕಾಧಿಕಾರಿಗಳು

ಆಡಳಿತ

ಕಛೇರಿ ವ್ಯವಸ್ಥಾಪಕರು

**ಆಡಳಿತ ಕ್ರಮ:**

ಮಾನವ ಸಂಪನ್ಮೂಲ ಸಚಿವಾಲಯ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ಇಲಾಖೆ, ಜಂಟಿ ನಿರ್ದೇಶಕರು.

ಉಪ ನಿರ್ದೇಶಕರು

ನಿರೂಪಣಾಧಿಕಾರಿಗಳು

ಶಿಶು ಅಭಿವೃದ್ಧಿ ಯೋಜನೆಯ ಅಧಿಕಾರಿಗಳು

ಸಹಾಯಕ ಶಿಶು ಅಭಿವೃದ್ಧಿ ಯೋಜನೆಯ ಅಧಿಕಾರಿಗಳು

ವಲಯ ಮಟ್ಟದ ಮೇಲ್ವಿಚಾರಕಿಯರು

ಅಂಗನವಾಡಿ ಕಾರ್ಯಕರ್ತೆಯರು

ಎಲ್.ಎಚ್.ವಿ.

ಕೇಂದ್ರ ಮಟ್ಟ-ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ರಾಜ್ಯಮಟ್ಟ-ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ

ಜಿಲ್ಲಾ ಮಟ್ಟ-ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಜಿಲ್ಲಾ ಮಟ್ಟ ಸಲಹೆಗಾರರು.

ತಾಲ್ಲೂಕು ಮಟ್ಟ-ವೈದ್ಯಾಧಿಕಾರಿಗಳು

ಗ್ರಾಮ ಮಟ್ಟ ಮಹಿಳಾ ಆರೋಗ್ಯ ಸಂದರ್ಶಿಕೆ

ಕಿರಿಯ ಮಹಿಳಾ ಆರೋಗ್ಯ ಸಂದರ್ಶಕಿ

ದಾದಿ ಆರೋಗ್ಯ ಮಾರ್ಗದರ್ಶನ

**ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿ**

೧. ಈ ಹುದ್ದೆಯು ಕೇವಲ ಮಹಿಳೆಯರಿಗೆ ಮಾತ್ರ

೨. ಸ್ಥಳೀಯರಿಗೆ ಮೊದಲ ಆದ್ಯತೆ

೩. ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿ ಜಿಲ್ಲಾ ಅಭಿವೃದ್ಧಿ ಅಧಿಕಾರಿಗಳಿಂದ ಮಾಡಲಾಗುತ್ತದೆ.

೪. ಅಂಗನವಾಡಿ ಕಾರ್ಯಕರ್ತೆಯರು ಕನಿಷ್ಠ ೧೦ನೇ ತರಗತಿ ತೇರ್ಗಡೆ ಹೊಂದಿರಬೇಕುಯ

**ಅಂಗನವಾಡಿ ಕಾರ್ಯಕರ್ತೆಯ ವೇತನ**

| | |
|---|---|
| ಕೇಂದ್ರಸರಕಾರದಿಂದ | : ೧,೫೦೦ |
| ರಾಜ್ಯ ಸರಕಾರದಿಂದ | : ೧,೦೦೦ |
| ಒಟ್ಟು | : ೨,೫೦೦ |

**ಅಂಗನವಾಡಿ ಸಹಾಯಕಿಯ ವೇತನ**

| | |
|---|---|
| ಕೇಂದ್ರಸರಕಾರದಿಂದ | : ೭೫೦ |
| ರಾಜ್ಯ ಸರಕಾರದಿಂದ | : ೫೦೦ |
| ಒಟ್ಟು | : ೧,೨೫೦ |

**ಅಂಗನವಾಡಿ ಕಾರ್ಯಕರ್ತೆಯರ ತರಬೇತಿ**

ಅಂಗನವಾಡಿ ಕಾರ್ಯಕರ್ತೆಯರಿಗೆ ಹಳ್ಳಿಗಳಲ್ಲಿ ಮಕ್ಕಳಿಗೆ ಯಾವ ರೀತಿ ಶಿಕ್ಷಣ ಒದಗಿಸಬೇಕು. ಅವರಿಗೆ ಚೈತನ್ಯ ತುಂಬುವಂತೆ ಹೇಗೆ ಮಾಡಬೇಕು, ಮಕ್ಕಳ ವಿಕಾಸ ಮತ್ತು ಆರೋಗ್ಯದ ಬಗ್ಗೆ ಮಾಹಿತಿ, ಪೌಷ್ಟಿಕತೆ ಇತ್ಯಾದಿಗಳ ಬಗ್ಗೆ ತರಬೇತಿಯನ್ನು ಅಥವಾ ವ್ಯವಸ್ಥೆಯನ್ನು ಯೋಜನಾಧಿಕಾರಿಗಳು ಮಾಡುತ್ತಾರೆ. ಈ ರೀತಿಯಾಗಿ ಸಮಗ್ರ ಬಾಲ ವಿಕಾಸ ಯೋಜನೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಮಹತ್ವದ ಪಾತ್ರವನ್ನು ನಿರ್ವಹಿಸುತ್ತಾರೆ.

**ಅಂಗನವಾಡಿ**

ಅಂಗನವಾಡಿ ಮಕ್ಕಳಿಗಾಗಿ ಇರುವ ಒಂದು ಪ್ರಮುಖ ಸಂಸ್ಥೆ. ಇದಕ್ಕೆ ಹಲವಾರು ಉದ್ದೇಶಗಳುಂಟು. ಇಲ್ಲಿ ಮಕ್ಕಳು ತಮ್ಮ ವಯಸ್ಸಿನ ಇತರ ಮಕ್ಕಳೊಡನೆ ಆಟವಾಡುವುದು ಮತ್ತು ಸಾಮಾಜಿಕ

ರೂಢಿಗಳನ್ನು ಕಲಿಯಲು ಹಾಗೂ ಕಟ್ಟುನಿಟ್ಟಿನಲ್ಲಿ ಶಾಲಾಪೂರ್ವಶಿಕ್ಷಣವನ್ನು ಪಡೆಯಲು ಏರ್ಪಾಡು ಮಾಡಿಸಿ ಅಂಗನವಾಡಿಯಲ್ಲಿ ಮಕ್ಕಳ ಆರೋಗ್ಯವನ್ನು ಗಮನಿಸುತ್ತಾರೆ ಮತ್ತು ಪೌಷ್ಟಿಕ ಆಹಾರ ಕೊಡುತ್ತಾರೆ.

ಮಕ್ಕಳಿಗೆ ಸೋಂಕುನಿವಾರಣೆ ಮಾಡಿಸಬೇಕು. ಡೋಸನ್ನು ಸಹಾಯಕ ನರ್ಸ್, ಸೂಲಗಿತ್ತಿಯರು ನೀಡಬೇಕು. ಆದರೆ ಸೋಂಕು ನಿವಾರಣೆ ಮಾಡಿಸುವ ಅಗತ್ಯವಿರುವುದನ್ನು ಗುರುತಿಸುವಲ್ಲಿ ಕಾರ್ಯಕರ್ತೆಯರು ತುಂಬಾ ಜಾಗೃತರಾಗಿರಬೇಕು. ಅಂಗನವಾಡಿಯಲ್ಲಿ ಮುಖ್ಯವಾದ ಕೆಲಸ ಐ.ಸಿ.ಐ.ಎಸ್. ಯೋಜನೆಯ ಮೇರೆಗೆ ತಾಯಂದಿರ ಮತ್ತು ಮಕ್ಕಳ ಸಂಬಂಧವಾದ ಮುಖ್ಯ ಹೊಣೆ ಕಾರ್ಯಕರ್ತೆಯರದ್ದಾಗಿರುತ್ತದೆ.

ಅಂಗನವಾಡಿಯನ್ನು ಸಮರ್ಥವಾಗಿ ನಡೆಸುವ ಜವಾಬ್ದಾರಿಯನ್ನು ಅಂಗನವಾಡಿ ಕಾರ್ಯಕರ್ತೆಯರು ವಹಿಸಬೇಕು. ಒಂದು ಮಾದರಿ ದಿನದ ವಿವರಣೆಯನ್ನು ಈ ಮುಂದೆ ಕೊಟ್ಟಿದೆ.

೧. ಅಂಗವಾಡಿಗೆ ಮಕ್ಕಳು ಆಗಮಿಸುವುದಕ್ಕೆ ಮುಂಚೆ ಕಾರ್ಯಕರ್ತೆಯರು (೨೦-೩೦) ನಿಮಿಷ ಮುಂಚಿತವಾಗಿ ಬಂದು ತಲುಪಬೇಕು.

೨. ಮಕ್ಕಳಿಗೆ ಮತ್ತು ಮಹಿಳೆಯರಿಗೆ ಕೊಡತಕ್ಕಂತಹ ದಿನದ ಪೂರಕ ಆಹಾರವನ್ನು ಸಹಾಯಕರ ಅಥವಾ ಸ್ಥಳೀಯರ ನೆರವಿನಿಂದ ತಯಾರಿಸಬಹುದು.

೩. ಮಕ್ಕಳು (ಮೂರು ವರ್ಷಕ್ಕೆ ಮೇಲ್ಪಟ್ಟ ಆರು ವರ್ಷಕ್ಕೆ ಒಳಗಿನ) ಬಂದು ಕೂಡುವ ಅಂಗನವಾಡಿ ಸ್ಥಳ ಹಾಗೂ ಸುತ್ತಮುತ್ತಲಿನ ಪ್ರವೇಶವನ್ನು ಸ್ವಚ್ಛಗೊಳಿಸಿ ಸಿದ್ಧಪಡಿಸಬೇಕು.

೪. ಮಕ್ಕಳ ಹಾಜರಿಯನ್ನು ದಿನಾಂಕದೊಂದಿಗೆ ಹಾಕಬೇಕು. ಅದರಲ್ಲಿ ಹಿರಿಯ ಮಗುವಿಗೆ ಉಳಿದ ಮಕ್ಕಳು ಗಲಾಟೆ ಮಾಡದಂತೆ ನೋಡಿಕೊಳ್ಳುವ ಕೆಲಸವನ್ನು ಒಪ್ಪಿಸಬೇಕು. ಮಕ್ಕಳ ಕೈ-ಕಾಲು, ಕೂದಲು, ಬಟ್ಟೆ ಮುಂತಾದವುಗಳ ಸ್ವಚ್ಛತೆಯನ್ನು ಗಮನಿಸಬೇಕು.

೫. ಪ್ರತಿದಿನ ಅವರಿಗೆ ಪ್ರಾರ್ಥನೆಯನ್ನು ಮಾಡಿಸಬೇಕು.

೬. ಮಕ್ಕಳಿಗೆ ಕಥೆಗಳನ್ನು ಹೇಳುವುದು ನಾಟಕ, ಗೊಂಬೆಯಾಟ ತೋರಿಸುವುದು ಮತ್ತು ಮಕ್ಕಳಿಂದ ಹಾಡುಗಳನ್ನು ಹಾಡಿಸುವುದು ಮುಂತಾದ ಚಟುವಟಿಗಳನ್ನು ಮಾಡಿಸುವುದು. ವಿವಿಧ ಸಾಧನಗಳ ಗಾತ್ರ, ಬಣ್ಣ ಸಂಖ್ಯೆ ಇತ್ಯಾದಿ ಬಗ್ಗೆ ತಿಳಿಸಿ ಹೇಳುವುದು. ಮಕ್ಕಳನ್ನು ವಿವಿಧ ಸಮಯಗಳಲ್ಲಿ ಗುಂಪಾಗಿ ಅಥವಾ ಬೇರೆ ಬೇರೆಯಾಗಿ ಮೈದಾನದಲ್ಲಿ ಆಟವಾಡಿಸುವುದು.

೭. ಪೂರಕ ಆಹಾರ ನೀಡಲು ಮಕ್ಕಳನ್ನು ಮತ್ತು ಮಹಿಳೆಯರನ್ನು ಕಲೆಹಾಕಿ ಮಕ್ಕಳಿಗೆ ಗರ್ಭಿಣಿಯರಿಗೆ ಮತ್ತು ತಾಯಂದಿರಿಗೆ ಪೂರಕ ಆಹಾರ ಹಂಚುವುದು.

೮. ಮಕ್ಕಳನ್ನು ಒಟ್ಟೊಟ್ಟಾಗಿ ಕಳುಹಿಸದೆ ಅಲ್ಲಿರುವಂತಹ ಸಹಾಯಕಿ ಅಥವಾ ಕುಟುಂಬದವರ ಜೊತೆ ಮನೆಗೆ ಕಳಿಸುವುದು.

೯. ಅಂಗನವಾಡಿಯನ್ನು ಸ್ವಚ್ಛಗೊಳಿಸಿ ಅಚ್ಚುಕಟ್ಟುಗೊಳಿಸಿ ಕೊನೆಯಲ್ಲಿ ಮುಚ್ಚುವುದು.

೧೦. ತಾಯಂದಿರು ಮತ್ತು ಮಕ್ಕಳ ಸಹಾಯದಿಂದ ಪೂರಕ ಆಹಾರ ಹಂಚಿಕೆಯಾದ ತರುವಾಯ ಮಕ್ಕಳ ಕೈತೊಳೆದು ಪಾತ್ರೆಗಳನ್ನು ಸ್ವಚ್ಛಗೊಳಿಸಿ ಆ ಸ್ಥಳವನ್ನು ಅಚ್ಚುಕಟ್ಟಾಗಿರಿಸುವುದು.

೧೧. ಸಹಾಯಕ ನರ್ಸ್, ಸೂಲಗಿತ್ತಿ ಅಥವಾ ಮೇಲ್ವಿಚಾರಕರೊಡನೆ ಸಮಾಲೋಚಿಸಿದ ಬಗ್ಗೆ ಹಾಗೂ ವಿಶೇಷ ಸಮಸ್ಯೆಗಳನ್ನು ಡೈರಿಯಲ್ಲಿ ಬರೆದುಕೊಳ್ಳುವುದು.

೧೨. ಗುರುತು ಕಾರ್ಡುಗಳನ್ನು ಪರೀಕ್ಷಿಸಿ ರಿಜಿಸ್ಟರ್‌ಗಳಲ್ಲಿ ಗುರುತುಮಾಡಬೇಕು.

**ಉದ್ದೇಶಗಳು**

ICDS ಮೂಲ ಗುರಿಯು ಒಂದೇ ಆಗಿರುತ್ತದೆ. ಇದು ಮಹಿಳೆ ಮತ್ತು ಮಕ್ಕಳ ಆರೋಗ್ಯ ರಕ್ಷಣೆ ಸರ್ವತೋಮುಖ ಬೆಳವಣಿಯಾಗಿದೆ. ಗುರಿ ಒಂದೇ ಇದ್ದರೂ ಅದರ ಉದ್ದೇಶಗಳು ಹಲವಾರು ಇವೆ. ಅವು ಈ ಕೆಳಗಿನಂತಿವೆ.

೧. ಶಾಲೆ ಬಿಡುವ ಮಕ್ಕಳನ್ನು ಕಡಿಮೆ ಮಾಡುವುದು.

೨. ತಾಯಂದಿರ ತಿಳುವಳಿಕೆ ಹೆಚ್ಚಿಸುವುದು.

೩. ಸರ್ಕಾರದ ವಿವಿಧ ಇಲಾಖೆಗಳನ್ನು ಸಮನ್ವಯಗೊಳಿಸುವುದು.

೪. ಶಿಶು ಮರಣ ಸಂಖ್ಯೆಯನ್ನು ಕಡಿಮೆ ಮಾಡುವುದು.

೫. ೦-೬ ವರ್ಷಗಳ ಅವಧಿಯ ಮಕ್ಕಳ ಪೌಷ್ಟಿಕ ಆಹಾರ ಹಾಗೂ ಆರೋಗ್ಯ ಮಟ್ಟವನ್ನು ವೃದ್ಧಿಸುವುದು.

೬. ಮಕ್ಕಳಿಗೆ ಸೂಕ್ತ ಮಾನಸಿಕ, ಭೌತಿಕ ಬೆಳವಣಿಗೆಗೆ ಬುನಾದಿ ಹಾಕುವುದು.

ICDS ಸೇವೆಗಳು

೧. ಶಾಲಾಪೂರ್ವ ಶಿಕ್ಷಣ

೨. ಪೂರಕ ಪೌಷ್ಟಿಕ ಆಹಾರ

೩. ರೋಗ ನಿರೋಧಕ ಚುಚ್ಚು ಮದ್ದು

೪. ಆರೋಗ್ಯ ತಪಾಸಣೆ

೫. ಮಾಹಿತಿ ಸೇವೆ

೬. ಆರೋಗ್ಯ ಆಹಾರ

ಇದರಲ್ಲಿ ನಾಲ್ಕು ಸೇವೆಗಳನ್ನು ನೇರವಾಗಿ ಇಲಾಖೆಯೇ ನೋಡಿಕೊಳ್ಳುತ್ತದೆ. ಒಂದರಿಂದ ನಾಲ್ಕು ಅಂಶಗಳು ಉಳಿದ ಎರಡು ಅಂಶಗಳನ್ನು ಆರೋಗ್ಯ ಇಲಾಖೆಯು ಜೊತೆಗೂಡಿ ಕಾರ್ಯಗತಗೊಳಿಸುತ್ತದೆ.

# ಅಧ್ಯಾಯ ಮೂರು

೧. ಸಮಗ್ರ ಬಾಲವಿಕಾಸ ಯೋಜನೆಯ ಪರಿಚಯ

೨. ಸಮಗ್ರ ಬಾಲವಿಕಾಸ ಯೋಜನೆ

೩. ಅಂಗನವಾಡಿ ಕಾರ್ಯಕರ್ತೆಯರ ಒಂದು ವಿವರ

೪. ಅಂಗನವಾಡಿ ಕಾರ್ಯಕರ್ತೆಯ ಚಟುವಟಿಕೆ

# ಅಧ್ಯಾಯ ಮೂರು

## ೩.೧. ಸಮಗ್ರ ಬಾಲ ವಿಕಾಸ ಯೋಜನೆಯ ಪರಿಚಯ

೬ ವರ್ಷದೊಳಗಿನ ೧೧೦ ದಶಲಕ್ಷ ಮಕ್ಕಳ ಭಾವಿ-ಭವಿಷ್ಯವನ್ನು ಸದುದ್ದೇಶದಿಂದ ಭಾರತ ಸರಕಾರವು ಅಕ್ಟೋಬರ್ ೨, ೧೯೭೫ರಂದು ಗಾಂಧೀಜಿಯರ ೧೦೬ನೇ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಸಮಗ್ರ ಬಾಲವಿಕಾಸ ಯೋಜನೆಯನ್ನು ಜಾರಿಗೆ ತಂದಿತು.

ಆರಂಭದಲ್ಲಿ ಪ್ರಾಯೋಗಿಕವಾಗಿ ೩೩ ಬ್ಲಾಕ್‌ಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು. ನಂತರದಲ್ಲಿ ಹಂತ ಹಂತವಾಗಿ ಹೆಚ್ಚಿಸುತ್ತ ೧೯೮೮ ಮಾರ್ಚ್ ಕೊನೆಯ ವೇಳೆಗೆ ೧೫೫೧ ಸಮುದಾಯ ಅಭಿವೃದ್ಧಿ ಬ್ಲಾಕ್‌ಗಳಲ್ಲಿ ಅನುಷ್ಠಾಗೊಳಿಸಲಾಯಿತು. ಹಾಗೆಯೇ ನಗರ ಪ್ರದೇಶದ ಹಿಂದುಳಿದ ಮತ್ತು ಕೊಳಗೇರಿ ಪ್ರದೇಶಗಳಲ್ಲಿ ೧೮೭ ಸಮಗ್ರ ಬಾಲವಿಕಾಸ ಯೋಜನೆಗಳನ್ನು ಜಾರಿಗೆ ತರಲಾಯಿತು.

ಈ ಬೃಹತ್ ಯೋಜನೆಯಲ್ಲಿ ಸುಮಾರು ೨ ಲಕ್ಷಕ್ಕೂ ಹೆಚ್ಚು ಸಿಬ್ಬಂದಿ ಮಕ್ಕಳ ತಾಯಂದಿರ ಮೂಲಭೂತ ಆರೋಗ್ಯ ಸೇವೆ ಹಾಗೂ ಶಾಲಾಪೂರ್ವ ಕಾರ್ಯ ಚಟುವಟಿಕೆಯಲ್ಲಿ ನಿರತರಾಗಿದ್ದಾರೆ. ಎಂಟನೆಯ ಪಂಚವಾರ್ಷಿಕ ಯೋಜನೆಯ ಕೊನೆಯ ಹೊತ್ತಿಗೆ ಈ ವಿಕಾಸ ದೇಶದ ಎಲ್ಲ ಸಮುದಾಯ ಅಭಿವೃದ್ಧಿ ಕ್ಷೇತ್ರಗಳ ಸುಮಾರು ೫೧೮೩ ಸಮಗ್ರ ಬಾಲವಿಕಾಸ ಯೋಜನೆಯಡಿಯಲ್ಲಿ ಬರಲಿವೆ.

ಕೇಂದ್ರ, ರಾಜ್ಯ ಸ್ವಯಂ ಸೇವಾ ಸಂಸ್ಥೆಗಳ ಹಾಗೂ ಸಮುದಾಯದ ಎಲ್ಲ ಸಂಪನ್ಮೂಲಗಳನ್ನು ಕ್ರೋಡೀಕರಿಸಿಕೊಂಡು ಮಕ್ಕಳ ಉದಾತ್ತ ಬೆಳವಣಿಗೆ ಹಾಗೂ ಅಭಿವೃದ್ಧಿಗೆ ಈ ಯೋಜನೆಯಲ್ಲಿ ಪರಿಶ್ರಮ ಪಡಲಾಗುತ್ತಿದೆ. ಮಹಿಳಾ ಮತ್ತು ಮಕ್ಕಳ ಇಲಾಖೆ, ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆ, ಗ್ರಾಮಾಭಿವೃದ್ಧಿ ಇಲಾಖೆಗಳ ಸಹಕಾರ ಇಲ್ಲದೆ ವ್ಯಕ್ತಿಯ ಬೆಳವಣಿಗೆಯ ಹಂತದಲ್ಲಿ ಆತನ ಜನನ ಪೂರ್ವ ಅವಧಿ ೯ ತಿಂಗಳು ಮತ್ತು ಜನನ ನಂತರ ೬ ತಿಂಗಳು ಹಾಗೂ ನಂತರ ೫ ವರ್ಷಗಳ ಅವನ ಸಮಗ್ರ ಬೆಳವಣಿಗೆಯ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಿಂದ ತುಂಬಾ ಮಹತ್ವದ ಕಾಲಾವಧಿ.

ಈ ದೃಷ್ಟಿಯಿಂದ ಗರ್ಭಿಣಿ ಬಾಣಂತಿ, ಹಾಗೂ ಹಾಲುಣಿಸುವ ತಾಯಿ ಹಾಗೂ ಆರು ವರುಷದ ಒಳಗಿನ ಮಗುವಿನ ಕಾಳಜಿ ತೀರಾ ಅವಶ್ಯಕ ಅಂತೆಯೇ ಸಮಗ್ರ ಬಾಲ ವಿಕಾಸ ಯೋಜನೆಯಲ್ಲಿ

೧. ಆರು ಮಾರಕ ರೋಗಗಳ ವಿರುದ್ಧ ಚುಚ್ಚು ಮದ್ದು ನೀಡುವುದು.

೨. ಆರೋಗ್ಯ ತಪಾಸಣೆ.

೩. ಅಶಕ್ತ ಮಕ್ಕಳನ್ನು ಹೆಚ್ಚಿನ ಪರಿಣತ ಸೇವೆ ಹೊಂದಲು ವೈದ್ಯರಲ್ಲಿ ಕಳುಹಿಸಿ ಕೊಡುವುದು.

೪. ತಾಯಂದಿರಿಗೆ ಆರೋಗ್ಯ ಮತ್ತು ಪೌಷ್ಟಿಕತೆಯ ಕುರಿತು ಶಿಕ್ಷಣ.

೫. ೩ರಿಂದ ೬ ವರ್ಷದ ಮಕ್ಕಳಿಗೆ ಶಾಲಾಪೂರ್ವ ಶಿಕ್ಷಣ.

೬. ಇತರ ಸಹಕಾರಿ ಸೇವೆಗಳಿಂದ ನೀರು ಪೂರೈಕೆ, ನೈರ್ಮಲ್ಯ ಇತ್ಯಾದಿ ಸೇವೆಗಳ ಬರುತ್ತವೆ.

ಇಂಟಿಗ್ರೇಟೆಡ್ ಚಾಲ್ಡ್ ಡೆವಲಪ್‌ಮೆಂಟ್ ಸರ್ವಿಸ್ ಅಥವಾ ಐ.ಸಿ.ಡಿ.ಎಸ್. ಎಂದು ಗುರುತಿಸಲ್ಪಟ್ಟು ಠಔ )ಗ ಈ ಯೋಜನೆಯಲ್ಲಿ "ಅಂಗನವಾಡಿ" ಕೇಂದ್ರ ಬಿಂದು ಅಂಗನವಾಡಿ ಕಾರ್ಯಕರ್ತೆ ಹಾಗೂ ಆಕೆಯ ಸಹಾಯಕಿಯಿಂದ ನಡೆಸಲ್ಪಡುತ್ತದೆ. ಸಾಮಾನ್ಯವಾಗಿ ಪ್ರತಿ ಗ್ರಾಮೀಣ ಸಮುದಾಯದ ಒಂದು ಸಾವಿರ ಜನವಸತಿಗೆ ಒಂದು ಅಂಗನವಾಡಿ ಕೇಂದ್ರ ಇದ್ದಂತೆ, ಗುಡ್ಡಗಾಡು ಜನಸಮುದಾಯದಲ್ಲಿ ಪ್ರತಿ ೭೦೦ ಜನ ವಸತಿಗೆ ಒಂದು ಅಂಗನವಾಡಿ ಕೇಂದ್ರವಿರುತ್ತದೆ.

ಮೂಲತಃ ಗ್ರಾಮೀಣ ಪ್ರದೇಶದ ಬಡ ಹಾಗೂ ಅವಕಾಶಹೀನ ಮಕ್ಕಳ, ಗರ್ಭಿಣಿ, ಬಾಣಂತಿಯರಿಗೆ ಈ ಯೋಜನೆಯ ಲಾಭ ತಟ್ಟಬೇಕೆಂಬ ವಿಚಾರ ಇದ್ದರೂ ನಂತರದಲ್ಲಿ ನಗರ ಪ್ರದೇಶದ ಕೊಳಗೇರಿ ಹಾಗೂ ತೀರಾ ಹಿಂದುಳಿದ ಜನವಸತಿಗಳಿಗೂ ಈ ಸಮಗ್ರ ಬಾಲವಿಕಾಸ ಯೋಜನೆಯನ್ನು ಈಗ ಅನ್ವಯಿಸಲಾಗಿದೆ.

ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರು ಆಯಾ ಮೂಲಗಳಿಂದ ಬಂದವರಾಗಿದ್ದು, ಅವರ ಸಾಂಸ್ಕೃತಿಕ ಹಾಗೂ ಸಮುದಾಯ ಹಿನ್ನೆಲೆ ಈ ಯೋಜನೆಯ ಉದ್ದೇಶವನ್ನು ಸಕಾರಗೊಳಿಸಲು ಸಹಾಯಕವಾಗುತ್ತದೆ ಎನ್ನುವ ಭಾವನೆ ಇದೆ. ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿ ಸ್ವಯಂ ಸೇವಾ ಅರ್ಹತೆಯ ಮೇಲೆ ನಿಯುಕ್ತರಾದವರಿದ್ದು, ಅವರಿಗೆ ಗೌರವಧನವಾಗಿ ೨,೫೦೦ ರೂಪಾಯಿಗಳ ಗೌರವ ವೇತನ ನೀಡಲಾಗುತ್ತದೆ. ಇವರಿಗೆ ಮೂರು ತಿಂಗಳ ಅವಧಿಯ ಪ್ರಾರಂಭಿಕ ನೀಡಲಾಗುತ್ತದೆ.

ಸ್ವಯಂ ಸೇವಾ ಘಟಕಗಳು, ವೈದ್ಯಕೀಯ ಮಹಾವಿದ್ಯಾಲಯ ಅಂಗನವಾಡಿ ಕಾರ್ಯಕರ್ತೆಯರಿಗೆ, ಬಾಲ ವಿಕಾಸ ಯೋಜನಾಧಿಕಾರಿಗಳಿಗೆ ಮುಖ್ಯ ಸೇವಕಿಯವರಿಗೆ ಹಾಗೂ ಬಾಲವಿಕಾಸ ಯೋಜನಾ ವೈದ್ಯಾಧಿಕಾರಿಗಳಿಗೆ ಆಯಾ ವಲಯಗಳಲ್ಲಿ ಕಾಲಾನುಕಾಲಕ್ಕೆ ಅಲ್ಪಾವಧಿಯ ತರಬೇತಿ ಶಿಬಿರಗಳನ್ನು ಸಂಘಟಿಸುತ್ತಿವೆ.

೧೯೭೫-೭೮ರಲ್ಲಿ ಯೋಜನಾ ಆಯೋಗವು ಸಮಗ್ರ ಬಾಲ ವಿಕಾಸ ಯೋಜನೆಯ ಕಾರ್ಯನುಷ್ಠಾನವನ್ನು ಅಭ್ಯಸಿಸಿ ಯೋಜನೆಯ ವಿಸ್ತರಣೆಗೆ ಶಿಫಾರಸುಗೊಳಿಸಿತು. ೧೯೮೩ರಲ್ಲಿ ಯುನಿಸೆಫ್ ಸ್ವತಂತ್ರವಾಗಿ ಮೌಲ್ಯಮಾಪನ ಕಾರ್ಯ ಕೈಗೊಂಡು ಈ ಯೋಜನೆಗೆ ಪುರಸ್ಕಾರ ನೀಡಿತು.

ರಾಷ್ಟ್ರೀಯ ಮಟ್ಟದಲ್ಲಿ ಮಕ್ಕಳ ತಾಯಂದಿರ ಸಾವು ನೋವಿನ ಸಂಖ್ಯೆ ಇಳಿಸುವ ಪ್ರತಿಷ್ಠೆಯ ಕಾರ್ಯಕ್ರಮ ಇದಾದರೂ ಗ್ರಾಮೀಣ ಪ್ರದೇಶಗಳಲ್ಲಿ ಬಡತಾಯಂದಿರಿಗೆ, ಮಕ್ಕಳಿಗೆ ಪೂರಕ ಪೌಷ್ಟಿಕ ಆಹಾರ, ಚುಚ್ಚುಮದ್ದು ಸೇವೆ, ಆರೋಗ್ಯ ಸೇವೆ, ಸಾಮಾನ್ಯ ಆರೋಗ್ಯ ಶಿಕ್ಷಣ ದೊರೆಯುವ ಇದೇ ಈ ಯೋಜನೆಯ ಒಂದು ವರದಾನವಾಗಿದೆ. ಸೇವಾ ಕ್ಷೇತ್ರ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಮನ್ವಯತೆ ಮುಖ್ಯವಾಗಿದೆ. ಸರ್ಕಾರಿ ರಂಗದ ಕಿರಿಯ ಆರೋಗ್ಯ ಸಹಾಯಕ ಸಿಬ್ಬಂದಿ, ಅಂಗನವಾಡಿ ಕಾರ್ಯಕರ್ತೆ ಸಮುದಾಯ ಆರೋಗ್ಯ, ಮಾರ್ಗದರ್ಶಿ ಹಾಗೂ ತರಬೇತಿ ಹೊಂದಿದ ದಾಯಿ ಇವರುಗಳೆಲ್ಲ ಪರಸ್ಪರ ಸಹಕಾರದಿಂದ ಕಾರ್ಯಗೈದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮ ಯಶಸ್ವಿಯಾಗಿ ಅನುಷ್ಠಾನಗೊಳ್ಳುವಲ್ಲಿ ಯಾವ ಸಂಶಯವಿಲ್ಲ.

೧೯೯೦ನೇ ಇಸವಿಯನ್ನು ಸಮಗ್ರ ಬಾಲ ವಿಕಾಸ ಯೋಜನೆಯ ಸಾರ್ಥಕ ೧೫ನೆಯ ವರ್ಷದ ಸವಿನೆನಪಿನ ವರ್ಷವನ್ನಾಗಿ ಆಚರಿಸಿದರು. ಐ.ಸಿ.ಡಿ.ಎಸ್. ಮೇಲಿನ ಭಾರತದ ಮಹಾ ಲೆಕ್ಕಪಾಲಕರ ತಪಾಸಣಾ ವರದಿ ಮಹಿಳಾ ಮತ್ತು ಮಕ್ಕಳ ಕಲ್ಯಾಣದ ಎಲ್ಲ ಆಸಕ್ತರಿಗೆ ವಿವೇಚನೆಯನ್ನುಂಟು ಮಾಡಿತು. ಆ ವರದಿಯ ಪ್ರಕಾರ ೭ನೇ ಯೋಜನೆಯಲ್ಲಿ ಉದ್ದೇಶಿತ ವೆಚ್ಚ ೫೨೦ ಕೋಟಿ ರೂಪಾಯಿಗಳನ್ನು ಮೀರಿ ೬೬೦.೨೮ ಕೋಟಿ ರೂಪಾಯಿಗಳ ವೆಚ್ಚ ಮಾಡಿದ್ದಲ್ಲದೇ, ಯೋಜಿತ ಗುರಿ ೩೦೧೯ ಯೋಜನೆಗಳಲ್ಲಿ ಕೇವಲ ೨೨೩೬ ಯೋಜನೆಗಳನ್ನು ದಯಪಾಲಿಸಲಾಯಿತು. ಈ ಪೈಕಿ ವಾಸ್ತವಾಗಿ ೧೬೧೭ ಯೋಜನೆಗಳು ಮಾತ್ರ ಕಾರ್ಯೋನ್ಮುಖವಾಗಿದ್ದು ಇವುಗಳಲ್ಲಿ ೨೧೫ ಯೋಜನೆಗಳು ತಡೆಹಿಡಿಯಲ್ಪಟಿವೆ.

## ೩.೨. ಸಮಗ್ರ ಬಾಲವಿಕಾಸ ಸೇವಾ ಯೋಜನೆಯ ಗುರಿ ಮತ್ತು ಉದ್ದೇಶಗಳ

### ಗುರಿ

೧. ಪೂರಕ ಪೌಷ್ಟಿಕ ಆಹಾರವನ್ನು ನೀಡುವುದು

೨. ರೋಗ ನಿರೋಧಕ ಚುಚ್ಚುಮದ್ದು

೩. ಆರೋಗ್ಯ ಹಾಗೂ ಪೌಷ್ಟಿಕ ಆಹಾರ ಶಿಕ್ಷಣ

೪. ಆರೋಗ್ಯ ತಪಾಸಣೆ ಮಾಡುವುದು

೫. ರೂಢಿಗತವಲ್ಲದ ಶಾಲಾಪೂರ್ವ ಶಿಕ್ಷಣ

೬. ಮಾಹಿತಿ ಸೇವೆಗಳು

### ಉದ್ದೇಶಗಳು

೧. ೦-೬ ವರ್ಷಗಳ ಅವಧಿಯ ಮಕ್ಕಳ ಪೌಷ್ಟಿಕ ಹಾಗೂ ಆರೋಗ್ಯ ಮಟ್ಟವನ್ನು ವೃದ್ಧಿಸುವುದು.

೨. ಮಕ್ಕಳ ಸೂಕ್ತ ಮಾನಸಿಕ, ಬೌದ್ಧಿಕ ಹಾಗೂ ಸಾಮಾಜಿಕ ಬೆಳವಣಿಗೆ ಬುನಾದಿ ಹಾಕುವುದು.

೩. ಸಾವು, ಕಾಯಿಲೆ, ನ್ಯೂನ ಪೋಷಣೆ ಹಾಗೂ ಮಕ್ಕಳು ಶಾಲೆಗಳಿಂದ ಹೊರಗೆ ಉಳಿಯುವುದನ್ನು ಕಡಿಮೆ ಮಾಡುವುದು.

೪. ಸೂಕ್ತ ಪೋಷಣೆ ಹಾಗೂ ಆರೋಗ್ಯ ಶಿಕ್ಷಣದ ಮೂಲಕ ಮಗುವಿನ ಆರೋಗ್ಯ ಮತ್ತು ಪೋಷಕಾಂಶಗಳ ಅಗತ್ಯಗಳನ್ನು ನೋಡಿಕೊಳ್ಳುವ ಬಗ್ಗೆ ತಾಯಿಯ ತಿಳುವಳಿಕೆಯನ್ನು ಹೆಚ್ಚಿಸುವುದು.

೫. ಮಗುವಿನ ಬೆಳವಣಿಗೆಗಾಗಿ ವಿವಿಧ ಇಲಾಖೆಗಳಲ್ಲಿ ಯೋಜನೆಯನ್ನು ಕಾರ್ಯಗತಗೊಳಿಸುವಲ್ಲಿ ಪರಿಣಾಮಕಾರಿಯಾಗಿ ಸಂಚಾಲನ ಕಾರ್ಯವನ್ನು ನಿರ್ವಹಿಸುವುದು.

**ಪೌಷ್ಟಿಕ ಆಹಾರ**

ಸಾಮಾನ್ಯವಾಗಿ ಭಾರತದಂತಹ ಬಡ ದೇಶದಲ್ಲಿ ಜನರುಗೆ ತಮ್ಮ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ನೀಡಿ ಬೆಳೆಸಲು ಅಸಮರ್ಥರಾಗಿರುವರು. ಹೀಗಾಗಿ ಮಕ್ಕಳ ಆರೋಗ್ಯಕ್ಕೆ ಅವಶ್ಯವಿರುವ ಆಹಾರ ಸಿಗದೇ ಅವರು ರೋಗಿಗಳು, ಅಶಕ್ತರು ಅಥವಾ ಅಂಗವಿಕಲರು ಆಗಬಹುದು. ಕೇವಲ ಹೊಟ್ಟೆ ತುಂಬುವುದೊಂದೇ ಮುಖ್ಯ ಉದ್ದೇಶವಾಗಿರದೇ ಶಕ್ತಿಭರಿತ ಆಹಾರವನ್ನು ನೀಡುವುದು ತಂದೆ ತಾಯಿಗಳ ಕರ್ತವ್ಯವಾಗಿರುತ್ತದೆ. ಆದರೆ ಅದನ್ನು ನೀಡುವುದು ಬಡವರಿಗೆ ಅಸಾಧ್ಯವಾಗಿದೆ.

**ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮ**

ಸಮಗ್ರ ಬಾಲವಿಕಾಸ ಯೋಜನೆಯಡಿ ನಡೆಸಲಾಗುತ್ತಿರುವ ಈ ಕಾರ್ಯಕ್ರಮದ ಪೂರ್ಣ ವೆಚ್ಚದ ಅರ್ಧಭಾಗವನ್ನು ಕೇಂದ್ರ ಸರಕಾರವು ಭರಿಸುತ್ತದೆ.

**ಉದ್ದೇಶಗಳು**

ಆರು ವರ್ಷದೊಳಗಿನ ಮಕ್ಕಳ, ಗರ್ಭಿಣಿ ಮತ್ತು ಬಾಣಂತಿಯರ ಪೌಷ್ಟಿಕ ಮಟ್ಟವನ್ನು ಸುಧಾರಿಸುವುದು. ಈ ವರ್ಗಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಅಪೌಷ್ಟಿಕತೆಯನ್ನು ಹೋಗಲಾಡಿಸುವುದು.

**ನೀಡುತ್ತಿರುವ ಸೇವೆ**

೧. ಅರ್ಹ ಫಲಾನುಭವಿಗಳಿಗೆ ಅವರು ದಿನನಿತ್ಯ ಸೇವಿಸುತ್ತಿರುವ ಆಹಾರದಲ್ಲಿ ಸಿಗುವ ಕ್ಯಾಲೊರಿ, ಪ್ರೋಟಿನ್, ವಿಟಮಿನ್, ಖನಿಜಾಂಶಗಳ ಕೊರತೆ ಹಾಗೂ ಅವರಿಗೆ ಅವಶ್ಯವಿರುವ ಪ್ರಮಾಣಗಳ ನಡುವೆ ಇರುವ ವ್ಯತ್ಯಾಸವನ್ನು ಸರಿದೂಗಿಸಲು ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮದಡಿ ಅಂಗನವಾಡಿ ಮೂಲಕ ಪೂರಕ ಪೌಷ್ಟಿಕ ಆಹಾರವನ್ನು ಒದಗಿಸಲಾಗುತ್ತಿದೆ.

೨. ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿರುವ ೬ ತಿಂಗಳಿಂದ ೬ ವರ್ಷದ ಮಕ್ಕಳು, ಗರ್ಭಿಣಿ ಬಾಣಂತಿಯರ ಮತ್ತು ೧೧-೧೮ ವರ್ಷದ ಆಯಾ ಜಿಲ್ಲೆಯ ಕಿಶೋರಿಯರಿಗೆ ಪ್ರತಿ ಮಾಹೆ ಒಟ್ಟಾರೆ ಸುಮಾರು ೩೩ ಲಕ್ಷ ಫಲಾನುಭವಿಗಳಿಗೆ ಪೂರಕ ಪೌಷ್ಟಿಕ ಆಹಾರ ನೀಡಲಾಗುತ್ತಿದೆ.

೩. ಪ್ರತಿ ಮಗುವಿಗೆ ಪ್ರತಿ ದಿನ ೩೦೦ ಕ್ಯಾಲೊರಿ ಮತ್ತು ೮ರಿಂದ ೧೦ ಗ್ರಾಂ. ಪ್ರೋಟಿನ್ ಅಂಶವುಳ್ಳ ಆಹಾರ ವರ್ಷದಲ್ಲಿ ೩೦೦ ದಿನಗಳು ನೀಡಲಾಗುತ್ತಿದೆ.

೪. ೬ ತಿಂಗಳಿಂದ ೬ ವರ್ಷದ ಮಕ್ಕಳಿಗೆ ದಿನ ಒಂದಕ್ಕೆ ರೂ.೨.೦೦ ಮೌಲ್ಯದ ಪೂರಕ ಪೌಷ್ಟಿಕ ಆಹಾರ ನೀಡಲಾಗುತ್ತಿದೆ.

೫. ತೀವ್ರ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳಿಗೆ, ಗರ್ಭಿಣಿ, ಬಾಣಂತಿಯರಿಗೆ ಮತ್ತು ಕಿಶೋರಿಯರಿಗೆ ದುಪಟ್ಟು ದ್ವಿದಳ ಆಹಾರವನ್ನು ಪ್ರತಿ ಫಲಾನುಭವಿಗೆ ದಿನವೊಂದಕ್ಕೆ ರೂ.೩.೦೦ರಂತೆ ವರ್ಷದ ೩೦೦ ದಿನಗಳು ನೀಡಲಾಗುತ್ತಿದೆ.

ಮಕ್ಕಳು ತಮ್ಮ ಮನೆಯ ಆಹಾರವನ್ನು ತೆಗೆದುಕೊಂಡರೂ ಅದು ಕೆಲವೊಮ್ಮೆ ಸತ್ವಯುತವಾಗಿರಬಹುದು ಅಥವಾ ಇಲ್ಲದಿರಬಹುದು. ಅಂಥ ಕುಟುಂಬದ ಮಕ್ಕಳನ್ನು ಆಯ್ಕೆ ಮಾಡಿ ಅವರಿಗೆ ಈ ಅಂಗನವಾಡಿಗಳ ಮೂಲಕ ಪೌಷ್ಟಿಕ ಪೂರಕ ಆಹಾರವನ್ನು ನೀಡುವರು. ಈ ಆಹಾರವನ್ನು ಮಹಿಳೆ ಮತ್ತು ಮಕ್ಕಳಿಗೆ ಒದಗಿಸುವುದು ಅಂಗನವಾಡಿ ಕಾರ್ಯಕರ್ತೆಯರ ಕರ್ತವ್ಯವಾಗಿದೆ.

**ಆಹಾರ ಪದಾರ್ಥಗಳ ವರ್ಗೀಕರಣ**

ಶಕ್ತಿ ನೀಡುವ ಆಹಾರಗಳು

೧. ಗೋಧಿ, ಅಕ್ಕಿ, ಜೋಳ, ಮುಸಕಿನ ಜೋಳ ಮತ್ತು ಸಜ್ಜೆ ಮುಂತಾದ ಧಾನ್ಯಗಳ.

೨. ಬೇರುಗಳು, ಗೆಡ್ಡೆಗೆಣಸು, ಆಲೂಗಡ್ಡೆ, ಗೆಣಸು.

೩. ಬೆಲ್ಲ ಮತ್ತು ಸಕ್ಕರೆ.

೪. ಕೊಬ್ಬಿನ ಅಂಶ ಮತ್ತು ಎಣ್ಣೆ ಪದಾರ್ಥಗಳ ಅಂದರೆ ತುಪ್ಪ, ಎಣ್ಣೆಗಳು, ಬೆಣ್ಣೆ ಮತ್ತು ವನಸ್ಪತಿ ಇವು ಉತ್ತಮ ಶಕ್ತಿ ಮೂಲಗಳು.

ಮಕ್ಕಳಿಗೆ ಆರ್ಥಿಕ ಶಕ್ತಿಯ ಅಗತ್ಯ ತುಂಬಾ ಇದೆ. ಪುಟ್ಟ ಮಕ್ಕಳ ದಿನನಿತ್ಯ ಆಹಾರದಲ್ಲಿ ಶಕ್ತಿ ನೀಡುವ ಆಹಾರ ಪದಾರ್ಥಗಳನ್ನು ಸೇರಿಸಿಕೊಡುವುದು ಬಹಳ ಮುಖ್ಯವಾದುದು. ಸಣ್ಣ ಪ್ರಮಾಣದಲ್ಲಿ ಆಹಾರವನ್ನು ತೆಗೆದುಕೊಳ್ಳುವುದರ ಮೂಲಕ ಹೆಚ್ಚಿನ ಶಕ್ತಿಯನ್ನು ಮಗುವು ಪಡೆಯುವಂತಾಗಲು ಹಣ್ಣು ಮತ್ತು ಕೊಬ್ಬಿನ ಪದಾರ್ಥಗಳನ್ನು ಸಹ ಆಹಾರದಲ್ಲಿ ಸೇರಿಸಿಕೊಡಬೇಕು. ರಕ್ತ ವೃದ್ಧಿಗೆ ನೆರವು ನೀಡುವಂತಹ ಕಬ್ಬಿಣಾಂಶದಂತಹ ಕೆಲ ಹೆಚ್ಚಿನ ಪೌಷ್ಠಿಕಾಂಶಗಳ ಬೆಲ್ಲದಲ್ಲಿವೆ. ಈ ತರಹದ ಪೌಷ್ಟಿಕ ಆಹಾರವನ್ನು ಅಂಗನವಾಡಿ ಕಾರ್ಯಕರ್ತೆಯರು ಮಕ್ಕಳಿಗೆ ಕೊಡುತ್ತಾರೆ.

**ಬೆಳವಣಿಗೆ ಮತ್ತು ನಿರ್ವಹಣೆಗಾಗಿ ಆಹಾರ ಪದಾರ್ಥಗಳು**

ಬೆಳವಣಿಗೆ ಮತ್ತು ನಿರ್ವಹಣೆಗಾಗಿ ಅಗತ್ಯವಾಗಿರುವ ಉತ್ತಮವಾದ ಆಹಾರವೆಂದರೆ ದ್ವಿದಳ ಧಾನ್ಯಗಳು ಹೆಸರು, ಕಡಲೆಕಾಳು, ಕಡಲೆಬೇಳೆ ಇತ್ಯಾದಿ, ಬಟಾಣಿ ಮತ್ತು ಹುರುಳಿ ಸೋಯಾಬಿನ್ ಸೊಪ್ಪು ತರಕಾರಿ ಇತ್ಯಾದಿ ಮತ್ತು ಆಹಾರ ಯೋಗ್ಯವಾದ ಖನಿಜಗಳ ಪ್ರಾಣಿ ಜನ್ಯ ಆಹಾರಗಳಾದ ಅಂದರೆ ಹಾಲು, ಹಾಲಿನ ಪದಾರ್ಥಗಳು, ಮೊಟ್ಟೆಗಳು ಮಾಂಸ ಮತ್ತು ಮೀನು ಇವೂ ಸಹ ಬೆಳವಣಿಗೆ

ಮತ್ತು ನಿರ್ವಹಣೆಗೆ ಬಹಳ ಉತ್ತಮವಾದ ಆಹಾರಗಳು, ಇದರಲ್ಲಿ ಕೆಲವೊಂದು ಪದಾರ್ಥಗಳು ಬಡವರ ಮಕ್ಕಳಿಗೆ ಲಭ್ಯವಾಗುವುದಿಲ್ಲ ಅದನ್ನು ಅಂಗನವಾಡಿ ಕಾರ್ಯಕರ್ತೆಯರು ಒದಗಿಸುತ್ತಾರೆ.

**ರಕ್ಷಣೆಗಾಗಿ ಆಹಾರ ಪದಾರ್ಥಗಳು**

ಶರೀರದ ಸಮರ್ಪಕ ಕಾರ್ಯನಿರ್ವಹಣೆಗೆ ಮತ್ತು ಸಂರಕ್ಷಣೆಗೆ ಅಗತ್ಯವಾದಂತಹ ಕೆಲವು ಆಹಾರ ಪದಾರ್ಥಗಳಿವೆ. ಈ ಆಹಾರಗಳು ಖನಿಜ ಪದಾರ್ಥಗಳು ಮತ್ತು ಅನ್ನಾಂಗಗಳಂತಹ ಪ್ರಮುಖ ಪೌಷ್ಠಿಕಾಂಶಗಳನ್ನು ಒಳಗೊಂಡಿರುತ್ತದೆ. ಈ ಖನಿಜ ಪದಾರ್ಥಗಳು ಮತ್ತು ಅನ್ನಾಂಗಗಳಿಲ್ಲದಿದ್ದಲ್ಲಿ ಮಗುವು ಅನೇಕ ಕೊರತೆಯ ರೋಗದಿಂದ ನರಳುತ್ತದೆ.

**ಖನಿಜ ಪದಾರ್ಥಗಳು**

ಕ್ಯಾಲ್ಸಿಯಂ ಮತ್ತು ಕಬ್ಬಿಣಾಂಶವು ಅತ್ಯಂತ ಪ್ರಮುಖವಾದ ಖನಿಜ ಪದಾರ್ಥಗಳ. ಮೂಳೆಗಳು ಮತ್ತು ಹಲ್ಲುಗಳು ಬೆಳವಣಿಗೆಗೆ ಕ್ಯಾಲ್ಸಿಯಂ ಅಗತ್ಯವಾಗಿ ಬೇಕಾಗುತ್ತದೆ. ಆದ್ದರಿಂದ ಕ್ಯಾಲ್ಸಿಯಂ ಮಕ್ಕಳಿಗೆ ಅತ್ಯಂತ ಅಗತ್ಯವಾಗಿ ಬೇಕಾಗಿರುವ ಖನಿಜ ಪದಾರ್ಥ, ಕಬ್ಬಿಣಾಂಶವು ರಕ್ತ ವೃದ್ಧಿಗೆ ಮುಖ. ಹಸಿರು, ಸೊಪ್ಪು, ಸಜ್ಜೆ ಮತ್ತು ರಾಗಿ, ಮಾಂಸ, ಯಕೃತ್ (ಲಿವರ) ಮತ್ತು ಮೊಟ್ಟೆಗಳ ಕಬ್ಬಿಣಾಂಶ ದೊರಕುವ ಮೂಲಗಳು.

**ಉತ್ತಮ ಆರೋಗ್ಯ ನಿರ್ವಹಣೆ ಇವು ಅತ್ಯಂತ ಅವಶ್ಯಕ.**

**ಎ. ಅನ್ನಾಂಗ**

ಕಣ್ಣುಗಳು ಸಾಮಾನ್ಯ ಕಾಂತಿಗೆ ಮತ್ತು ಮೂಳೆಗಳ ಬೆಳವಣಿಗೆಗೆ ಇದು ಅತ್ಯಗತ್ಯವಾಗಿ ಬೇಕಾಗುತ್ತದೆ. ಅಷ್ಟೇ ಅಲ್ಲದೆ ಇದು ಮಕ್ಕಳನ್ನು ಆರೋಗ್ಯವಂತರನ್ನಾಗಿ ಇಡುತ್ತದೆ. "ಎ" ಅನ್ನಾಂಗದ ಕೊರತೆಯಿಂದ ದೃಷ್ಟಿಮಂದ ಉಂಟಾಗುತ್ತದೆ ಮತ್ತು ಕೊನೆಗೆ ಕುರುಡುತನಕ್ಕೆ ತಿರುಗುತ್ತದೆ. "ಎ" ಅನ್ನಾಂಗವು ಹಾಲು, ತುಪ್ಪ, ಮೊಟ್ಟೆ, ಹಸಿರು ಸೊಪ್ಪು ತರಕಾರಿಗಳು, ಬಸಳೆಸೊಪ್ಪು, ಪುದೀನ, ಮೂಲಂಗಿ ಸೊಪ್ಪು, ನುಗ್ಗೆ ಸೊಪ್ಪು, ಕೊತ್ತಂಬರಿ, ಕರಿಬೇವು ಮತ್ತು ಹಣ್ಣುಗಳು, ಕ್ಯಾರೆಟ್, ಕುಂಬಳಕಾಯಿ, ಮಾವು ಪರಂಗಿ ಇವುಗಳಲ್ಲಿ ಹೆಚ್ಚಾಗಿರುತ್ತದೆ.

**"ಬಿ" ಅನ್ನಾಂಗ**

ಈ ವರ್ಗದಲ್ಲಿ ಹಲವಾರು ಅನ್ನಾಂಗಗಳಿದ್ದು ಅವು ಸಾಮಾನ್ಯ ಬೆಳವಣಿಗೆಗೆ ಅಗತ್ಯವಾಗಿವೆ. ಮಾಂಸ, ಮೀನು, ಮೊಟ್ಟೆ, ಹಾಲು, ಧಾನ್ಯ ಬೀಜಗಳು ಮತ್ತು ಬೇಳೆಕಾಳುಗಳಲ್ಲಿ ಹೆಚ್ಚಾಗಿ ದೊರಕುತ್ತವೆ.

**"ಸಿ" ಅನ್ನಾಂಗ**

ಈ ಅನ್ನಾಂಗ ಆರೋಗ್ಯಕ್ಕೆ ಮತ್ತು ರೋಗದ ವಿರುದ್ಧ ರಕ್ಷಣೆ ನೀಡುವುದಕ್ಕೆ ಅಗತ್ಯವಾಗಿ ಬೇಕಾಗುತ್ತದೆ. ಹೊಸ ತಾಜಾ ತರಕಾರಿಗಳು ಮತ್ತು ಸೀಬೆ ಹಣ್ಣು, ನೆಲ್ಲಿಕಾಯಿ ಹುಳಿ ಹಣ್ಣುಗಳು ಮತ್ತು ಹಸಿರು ಸೊಪ್ಪು ತರಕಾರಿಗಳಲ್ಲಿ ಇದು ಹೆಚ್ಚಾಗಿ ಇರುತ್ತದೆ.

**ಡಿ ಅನ್ನಾಂಗ**

ಮೂಳೆಗಳ ಬೆಳವಣಿಗೆಗೆ ಅದು ಅತ್ಯಗತ್ಯವಾದದ್ದು "ಡಿ" ಅನ್ನಾಂಗವು ಚರ್ಮದ ಮೇಲೆ ಸೂರ್ಯಕಿರಣ ಬೀಳುವುದರಿಂದ ಪ್ರತಿಕ್ರಿಯೆ ಉಂಟಾಗಿ ಶರೀರದಲ್ಲಿ ಇದು ರೂಪುಗೊಳ್ಳುತ್ತದೆ. ಆದ್ದರಿಂದ ಮಕ್ಕಳ ಮೇಲೆ ಆದಷ್ಟು ಸೂರ್ಯಕಿರಣ ಬೀಳುವಂತೆ ನೋಡಿಕೊಳ್ಳಬೇಕು.

ಮಕ್ಕಳಿಗೆ ಮತ್ತು ಗರ್ಭಿಣಿ ಮಹಿಳೆಯರಿಗೆ ಈ ಮೇಲಿನ ಎಲ್ಲ ಅನ್ನಾಂಗಗಳ ಬಗ್ಗೆ ತಿಳುವಳಿಕೆ ಮೂಡಿಸುತ್ತಾರೆ. ಹಾಗೆ ಕೆಲವೊಂದು ಪೌಷ್ಟಿಕ ಆಹಾರ ಪದಾರ್ಥಗಳನ್ನು ಅಂಗನವಾಡಿಯಲ್ಲಿ ಕೊಡುತ್ತಾರೆ. ಅಂಗನವಾಡಿ ಕಾರ್ಯಕರ್ತೆಯರು ಮಧ್ಯಾಹ್ನದ ಸಮಯದಲ್ಲಿ ಅವರ ಮನೆಗೆ ಹೋಗಿ ಮಕ್ಕಳ ತಾಯಂದಿರಿಗೆ ಹಾಗೂ ಗರ್ಭಿಣಿಯರಿಗೆ ಈ ಎಲ್ಲ ತರಹದ ಆಹಾರ ಪದಾರ್ಥ ಕೊಡಬೇಕೆಂದು ಹೇಳುತ್ತಾರೆ.

**ಗರ್ಭಿಣಿ ಸ್ತ್ರೀಯರಿಗೆ ಮತ್ತು ಹಾಲುಣಿಸುವ ತಾಯಂದಿರಿಗೆ ಪೌಷ್ಟಿಕ ಆಹಾರ**

ಗರ್ಭಿಣಿ ಸ್ತ್ರೀಯರು ಮತ್ತು ಹಾಲುಣಿಸುವ ತಾಯಂದಿರು ಪೌಷ್ಟಿಕ ಆಹಾರ ಪದಾರ್ಥವನ್ನು ಸೇವಿಸಬೇಕು. ಹೆಚ್ಚು ಹೆಚ್ಚು ಬೇಳೆಕಾಳುಗಳು, ಧಾನ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಮೊಸರು ಮತ್ತು ತರಕಾರಿಗಳನ್ನು ತಿನ್ನಬೇಕು. ಹೀಗೆ ಅವರು ಸಮತೂಕದ ಆಹಾರವನ್ನು ಹಾಗೂ ವಿವಿಧ ರೀತಿಯ ಆಹಾರವನ್ನು ಸೇವಿಸಿದಲ್ಲಿ ಅವರಿಗೆ ಅಗತ್ಯವಾಗಿರುವ ಎಲ್ಲ ಪೌಷ್ಟಿಕಾಂಶಗಳು ದೊರೆಯುತ್ತವೆ. ಅಲ್ಲದೆ ಆಗಾಗ ಅವರು ತಿನ್ನುತ್ತಿರಬೇಕು. ಅಂದರೆ ದಿನಕ್ಕೆ ಮೂರು ನಾಲ್ಕು ಸಲ ಆಹಾರವನ್ನು ಸೇವಿಸುತ್ತಿರಬೇಕು.

ಹಾಲುಣಿಸುವ ತಾಯಂದಿರು ಹೆಚ್ಚು ಹೆಚ್ಚು ದ್ರವ ರೂಪದ ಆಹಾರ ಸೇವಿಸುವುದು ಮತ್ತು ನೀರನ್ನು ಹೆಚ್ಚಾಗಿ ಸೇವಿಸುವುದು ಅಗತ್ಯ. ಮಗುವಿಗಾಗಿ ಹೆಚ್ಚು ಹಾಲು ಉತ್ಪಾದನೆ ಆಗಬೇಕಾದರೆ ಹೆಚ್ಚು ನೀರನ್ನು ಕುಡಿಯಬೇಕು. ಬಡತನ ರೇಖೆಗಿಂತ ಕೆಳಗಿರುವ ಮಕ್ಕಳಿಗೆ ಪೌಷ್ಟಿಕ ಆಹಾರ ಒದಗಿಸುವುದರಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಪಾತ್ರ ಅತೀ ಮಹತ್ವದಾಗಿದೆ.

**ಆರೋಗ್ಯ ಸೇವೆಗಳು**

**ರೋಗ ನಿರೋಧಕ ಚುಚ್ಚುಮದ್ದು**

ಮಗು ಮುಂದೆ ಬೆಳದಂತೆ ಯಾವುದಾದರೂ ಮಾರಕ, ಸಾಂಕ್ರಾಮಿಕ ಅಥವಾ ಇತರ ಕ್ಷಯ, ಪೋಲಿಯೋ, ಸಿಡುಬು ಕಾಯಿಲೆಗಳಿಗೆ ಬಲಿಯಾಗಬಹುದು. ಇದನ್ನು ತಪ್ಪಿಸುವುದರಲ್ಲಿ ಅಂಗನವಾಡಿ ಕಾರ್ಯಕರ್ತೆಯ ಪಾತ್ರ ಮಹತ್ವದಾಗಿದೆ.

**ರೋಗ ನಿರೋಧಕ ಚುಚ್ಚುಮದ್ದಿನ ವೇಳಾಪಟ್ಟಿ**

**ಗರ್ಭಿಣಿ ಸ್ತ್ರೀಯರಿಗೆ**

ಗರ್ಭಾವಸ್ಥೆಯ ಪ್ರಾರಂಭದಲ್ಲಿ - ಟಿ.ಟಿ.೧ನೇ ಬಾರಿ ಚುಚ್ಚುಮದ್ದು

೧ನೇ ಬಾರಿ ಕೊಟ್ಟ ಒಂದು

| | | |
|---|---|---|
| ತಿಂಗಳ ನಂತರ | - | ಟಿ.ಟಿ.೨ನೇ ಬಾರಿ ಚುಚ್ಚುಮದ್ದು |
| | | **ಶಿಶುಗಳಿಗೆ** |
| ಹುಟ್ಟಿದಾಗ | : | ಬಿ.ಸಿ.ಜಿ ಚುಚ್ಚುಮದ್ದು |
| ಒಂದೂವರೆ ತಿಂಗಳು | : | ಡಿ.ಪಿ.ಟಿ ಚುಚ್ಚುಮದ್ದು ಮತ್ತು ಬಾಯಿಯ ಮೂಲಕ ಪೋಲಿಯೊ ಲಸಿಕೆ ೧ನೇ ಬಾರಿ |
| ಎರಡೂವರೆ ತಿಂಗಳು | : | ಡಿ.ಪಿ.ಟಿ ಚುಚ್ಚುಮದ್ದು ಮತ್ತು ಬಾಯಿ ಮೂಲಕ ಪೋಲಿಯೊ ೨ನೇ ಬಾರಿ |
| ಮೂರೂವರೆ ತಿಂಗಳು | : | ಡಿ.ಪಿ.ಟಿ. ಚುಚ್ಚುಮದ್ದು ಮತ್ತು ಬಾಯಿ ಮೂಲಕ ಪೋಲಿಯೋ ಲಸಿಕೆ ೩ನೇ ಬಾರಿ |
| ಒಂಬತ್ತು ತಿಂಗಳ ತರುವಾಯ ಅಥವಾ ೨೭೦ ದಿನಗಳ ನಂತರ | : | ದಡಾರ ಚುಚ್ಚು ಮದ್ದು |
| ೧೫ರಿಂದ ೨೪ ತಿಂಗಳ | : | ಡಿ.ಪಿ.ಟಿ. ವರ್ಧಕ ಚುಚ್ಚುಮದ್ದು ಹಾಗೂ ಬಾಯಿ ಮೂಲಕ ಪೋಲಿಯೋ ಲಸಿಕೆ ವರ್ಧಕ |

**ಆರೋಗ್ಯ ತಪಾಸಣೆ ಮತ್ತು ಮಾಹಿತಿ ಸೇವೆ**

ಸಮಗ್ರ ಶಿಶು ಅಭಿವೃದ್ಧಿ ಸೇವಾ ಯೋಜನೆಯಲ್ಲಿ ಮಕ್ಕಳಿಗೆ ಮತ್ತು ತಾಯಂದಿರಿಗೆ ಒದಗಿಸಬೇಕಾದ ಸೇವೆಗಳಲ್ಲಿ ಆರೋಗ್ಯ ತಪಾಸಣೆ ಮತ್ತು ಮಾಹಿತಿ ಸೇವೆಗಳು ಮುಖ್ಯವಾದವು. ಈ ಸೇವೆಗಳು ಗರ್ಭಿಣಿಯರಿಗೆ, ಬಾಣಂತಿಯರಿಗೆ ಮತ್ತು ಆರು ವರ್ಷದೊಳಗಿನ ಮಕ್ಕಳಿಗೆ ಸೂಕ್ತ ರಕ್ಷಣೆಗಳನ್ನು ಒದಗಿಸುವ ಈ ಸೇವೆಗಳನ್ನು ಒದಗಿಸುವಲ್ಲಿ ಕಾರ್ಯಕರ್ತೆಯರ ಪಾತ್ರ ಬಹು ಮುಖ್ಯವಾದುದು.

ಪ್ರತಿಯೊಬ್ಬ ಗರ್ಭಿಣಿಯು ಕನಿಷ್ಠ ನಾಲ್ಕು ಸಲ ಆರೋಗ್ಯ ತಪಾಸಣೆ ಪಡೆಯುವುದರ ಬಗ್ಗೆ ಸಲಹೆಗಳ ಕೊಡುವುದು, ಹೆರಿಗೆಯಾದ ೧೦ ದಿನಗಳಲ್ಲಿ ತಾಯಿಯನ್ನು ಕನಿಷ್ಠ ಎರಡು ಸಲ ಸಂದರ್ಶಿಸುವುದು. ಗರ್ಭಿಣಿಯರಿಗೆ ಮತ್ತು ಬಾಣಂತಿಯರಿಗೆ ಅಗತ್ಯವಿದ್ದಲ್ಲಿ ಪೌಷ್ಟಿಕ ಆಹಾರವನ್ನು ನೀಡತಕ್ಕದ್ದು. ೬ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಆರೋಗ್ಯ ಸಿಬ್ಬಂದಿಯಿಂದ ಪ್ರತಿ ೩ ತಿಂಗಳಿಗೆ ಒಂದು ಸಲ ಆರೋಗ್ಯ ತಪಾಸಣೆಯನ್ನು ಒದಗಿಸುವುದು.

**ಸಣ್ಣ ರೋಗಗಳಿಗೆ ಚಿಕಿತ್ಸೆ**

೧. ಹೊಟ್ಟೆಯಲ್ಲಿ ಜಂತು ಹುಳು ಇರುವುದು.

೨. ಜ್ವರ.

೩. ತಲೆನೋವು, ಮೈ ಕೈ ನೋವು.

೪. ಕಜ್ಜಿ, ತುರಿಕೆ.

೫. ಹೇನಿನಿಂದ ಬರುವ ಕಾಯಿಲೆ.

೬. ಕೆಮ್ಮು.

೭. ಕಣ್ಣಿನಲ್ಲಿ ನೀರು ಸುರಿಯುವುದು.

೮. ರವೆಗಣ್ಣು.

೯. ಕಿವಿ ನೋವು.

೧೦. ಗಾಯಗಳು.

೧೧. ಸಣ್ಣ ಗುಳ್ಳೆಗಳ ಮತ್ತು ಕುರುಗಳು.

ಈ ಮೇಲಿನ ರೋಗಗಳು ಮಗುವಿನಲ್ಲಿ ಕಂಡುಬಂದರೆ ಅಂಗನವಾಡಿ ಕಾರ್ಯಕರ್ತೆಯರು ರೋಗಗಳಿಗೆ ಚಿಕಿತ್ಸೆ ನೀಡಬಹುದು. ಒಂದು ವೇಳೆ ರೋಗಿಯ ಪರಿಸ್ಥಿತಿ ಇನ್ನೂ ಹದಗೆಟ್ಟರೆ ಆ ರೋಗಿಯನ್ನು ವೈದ್ಯರ ಬಳಿ ಕಳುಹಿಸುತ್ತಾರೆ.

### ಬಾಲ್ಯದ ವಿಕಲತೆಯನ್ನು ಪ್ರಾರಂಭದಲ್ಲಿಯೇ ತಡೆಯುವುದು

ಹುಟ್ಟುವ ಪ್ರತಿ ಹತ್ತು ಮಕ್ಕಳಲ್ಲಿ ಒಂದು ಮಗುವು ಹುಟ್ಟಿನಿಂದಲೇ ವಿಕಲತೆ ಹೊಂದಿರುತ್ತದೆ. ಇಲ್ಲವೇ ಮುಂದೆ ವಿಕಲತೆ ಹೊಂದುತ್ತದೆ. ಇಂಥ ಬಾಲ್ಯದ ವಿಕಲತೆಯನ್ನು ತಡೆಯಲು ಮತ್ತು ಪ್ರಾಥಮಿಕ ಹಂತದಲೇ ಪತ್ತೆ ಹೆಚ್ಚಲು ಅಂಗನವಾಡಿ ಕಾರ್ಯಕತೆಯರ ಪಾತ್ರ ಮಹತ್ವವಾದದ್ದು.

### ಬಾಲ್ಯ ವಿಕಲತೆಯ ವಿಧಗಳು

೧. ಮಾನಸಿಕ ವಿಕಲತೆ ಅಥವಾ ಬುದ್ಧಿಮಾಂದ್ಯತೆ.

೨. ಪೂರ್ಣ ಅಥವಾ ಭಾಗಶಃ ಕಿವುಡು.

೩. ವಾಕ ದೋಷಗಳು.

೪. ಭಾಗಶಃ ದೃಷ್ಟಿಯುಳ್ಳ ಅಥವಾ ಕುರುಡು.

೫. ಸ್ನಾಯು ವಿಕಲತೆ ಮತ್ತಿತರ ದೋಷಗಳು.

ಮಕ್ಕಳಲ್ಲಿ ಉಂಟಾಗುವ ಬಾಲ್ಯ ವಿಕಲತೆಗಳಿಗೆ ಪ್ರಮುಖ ಕಾರಣ ಎಂದರೆ ತಾಯಿ ಮತ್ತು ಮಕ್ಕಳ ಪೌಷ್ಟಿಕತೆ ಮತ್ತು ನಿರ್ದಿಷ್ಟ ಪೌಷ್ಟಿಕ ಆಹಾರ ಕೊರತೆ. ಜನನದ ಪೂರ್ವದಲ್ಲಿ ಅಥವಾ ಜನನ ಸಮಯದಲ್ಲಿ ಜನನ ನಂತರ ಸಮಯದಲ್ಲಿ ಉಂಟಾಗುವ ಅಸಾಧಾರಣ ಪರಿಸ್ಥಿತಿಗಳ ಹಾಗೂ ಪೋಲಿಯೋ ಮತ್ತು ಕುಷ್ಠದಂತಹ ರೋಗಗಳು, ಅಪಘಾತಗಳು, ಆನುವಂಶಿಕ ದೋಷಗಳು ಬರದಂತೆ ಅಂಗನವಾಡಿ ಕಾರ್ಯಕರ್ತೆಯರು ಗರ್ಭಿಣಿ ಸ್ತ್ರೀಯರಿಗೆ ಮತ್ತು ಬಾಣಂತಿಯರಿಗೆ ಹಾಗೂ ತಾಯಂದಿರಿಗೆ ಮುನ್ನೆಚ್ಚರಿಕೆ ಕೊಡುತ್ತಾರೆ.

## ಬುದ್ಧಿಮಾಂದ್ಯತೆ

ಬುದ್ಧಿಮಾಂದ್ಯತೆ ತಡೆಯುವ ಸಲುವಾಗಿ ಕಾರ್ಯಕರ್ತೆಯರು ಈ ಕೆಳಕಂಡ ವಿಷಯಗಳ ಬಗ್ಗೆ ಸಮುದಾಯದಲ್ಲಿ ತಿಳುವಳಿಕೆ ಮೂಡಿಸುವುದು.

ಹತ್ತಿರ ಸಂಬಂಧಿಗಳ ನಡುವೆ ವಿವಾಹಗಳನ್ನು ತಪ್ಪಿಸುವುದು. ೩೫ ವರ್ಷಗಳ ನಂತರ ಗರ್ಭಧರಿಸುವುದನ್ನು ತಪ್ಪಿಸುವುದು. ಗರ್ಭಿಣಿಯರು ವೈದ್ಯರ ಸಲಹೆ ಇಲ್ಲದೆ ಔಷಧಿಯನ್ನು ತೆಗೆದುಕೊಳ್ಳಬಾರದು, ಗರ್ಭಿಣಿಯರ ಗರ್ಭಧಾರಣೆಯ ಪೂರ್ವ ಅವಧಿಯಲ್ಲಿ ತಪ್ಪದೆ ವೈದ್ಯಕೀಯ ತಪಾಸಣೆ ಮಾಡಿಸಿಕೊಳ್ಳಬೇಕು ಎಂದು ಸಲಹೆ ಕೊಡುತ್ತಾರೆ. ಗರ್ಭಿಣಿಯರು ಹೆರಿಗೆಗಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ ಅಥವಾ ಆಸ್ಪತ್ರೆಗೆ ಹೋಗಬೇಕೆಂದು ತಿಳಿಸುತ್ತಾರೆ. ಒಂದು ವೇಳೆ ಮನೆಯಲ್ಲಿಯೇ ಹೆರಿಗೆ ಮಾಡಿಸಬೇಕಾದರೆ ಚೆನ್ನಾಗಿ ತರಬೇತಿ ಪಡೆದ ದಾದಿಯ ಸಹಾಯವನ್ನು ಪಡೆದುಕೊಳ್ಳಿರಿ ಎಂದು ತಿಳಿಸುತ್ತಾರೆ. ಸರಿಯಾದ ರೀತಿಯಲ್ಲಿ ಮತ್ತು ಅವರ ಭಾಷೆಯಲ್ಲಿಯೇ ಅವರಿಗೆ ತಿಳಿಯುವಂತೆಯೇ ಹೇಳುತ್ತಾರೆ.

## ಶಾಲಾಪೂರ್ವ ಶಿಕ್ಷಣ

ಈ ಅಂಗನವಾಡಿಯಲ್ಲಿ ಮಕ್ಕಳಿಗೆ ಸಾಮಾನ್ಯ ಶಿಕ್ಷಣವನ್ನು ಕಾರ್ಯಕರ್ತೆಯರು ಒದಗಿಸುತ್ತಾರೆ. ಮಗು ಶಾಲೆ ಸೇರುವ ಪೂರ್ವದಲ್ಲಿ ಕೆಲವು ವಿಷಯಗಳನ್ನು ತಿಳಿಸಬೇಕಾಗುತ್ತದೆ. ಮಗುವಿನ ಪರಿಸರದಲ್ಲಿ ಕಂಡುಬರುವ ಧಾನ್ಯ, ಹಣ್ಣು ಹಂಪಲು, ಗಿಡ, ಹೂವುಗಳ ಬಗ್ಗೆ ಮಗು ತಿಳಿಯುವಂತೆ ಕಾರ್ಯಕರ್ತೆಯರು ಅವುಗಳನ್ನು ಅವರಿಗೆ ಕಥೆ ಹಾಡುಗಳ ಹೇಳುವ ಮೂಲಕ ಅವರಲ್ಲಿ ಸ್ನೇಹ ಭಾವನೆಯನ್ನು ಹಾಗೂ ಸಹಕಾರ ಗುಣಗಳನ್ನು ಕಲಿಸುತ್ತಾರೆ.

ಗುರು ಹಿರಿಯರನ್ನು ಪ್ರೀತಿಸುವಂತೆ, ಗೌರವಿಸುವಂತೆ, ಮಗುವಿಗೆ ಹೇಳಿಕೊಡುತ್ತಾರೆ. ಮಗುವಿಗೆ ನಾಡಿನ ಮೇಲೆ ಪ್ರೀತಿ ಬೆಳೆಯುವಂತೆ ದೇಶಭಕ್ತಿ ಗೀತೆಗಳನ್ನು ಹೇಳುವುದು, ಮಹನಿಯರ ಆದರ್ಶಗಳನ್ನು ಹೇಳುವುದು, ದೇಶದ ನಾಯಕರನ್ನು ಗುರುತಿಸುವಂತೆ ಭಾವಚಿತ್ರಗಳನ್ನು ತೋರಿಸುವುದರೊಂದಿಗೆ ಮಗುವಿಗೆ ಶಾಲಾಪೂರ್ವ ಶಿಕ್ಷಣ ನೀಡಬೇಕು.

## ಶಾಲಾಪೂರ್ವ ಚಟುವಟಿಕೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಪಾತ್ರ

೧. ಅಂಗನವಾಡಿಯ ಶಾಲಾಪೂರ್ವ ಶಿಕ್ಷಣವು ದೈಹಿಕ, ಸಾಮಾಜಿಕ, ಭಾವನಾತ್ಮಕ ಮತ್ತು ಮಾನಸಿಕ ಮುಂತಾದ ಸಮಗ್ರ ಬೆಳವಣಿಗೆಗೆ ದಾರಿ ಮಾಡಿಕೊಡುತ್ತದೆ.

೨. ಶಾಲಾಪೂರ್ವ ಚಟುವಟಿಕೆಗಳನ್ನು ದೈಹಿಕ ಬೆಳವಣಿಗೆಗೆ, ಭಾಷೆ ಬೆಳವಣಿಗೆಗೆ ಮತ್ತು ಬೌದ್ಧಿಕ ಬೆಳವಣಿಗೆಗೆ ತಕ್ಕಂತೆ ರೂಪಿಸಿರುತ್ತಾರೆ.

೩. ಸಮಗ್ರ ಚಲನಾ ಬೆಳವಣಿಗೆ, ಚಟುವಟಿಕೆಗಳು. ಓದುವುದು, ನೆಗೆಯುವುದು, ಹಗ್ಗದಾಟ, ಜಿಗಿಯುವುದು ಮುಂತಾದವು. ಸೂಕ್ಷ್ಮ ಚಲನಾ ಬೆಳವಣಿಗೆಗಳು ಎಂದರೆ ಚಿತ್ರ ಬರೆಯುವುದು, ಮಣಿ ಪೋಣಿಸುವುದು, ಬೀಜಗಳು, ಕಲ್ಲುಗಳು, ಗುಂಡಿಗಳು ಮುಂತಾದವುಗಳನ್ನು ಜೋಡಿಸುವುದನ್ನು ಕಲಿಸುವುದು.

೪. ಮಕ್ಕಳು ತಮ್ಮ ಕೈಗಳಿಂದ ಸೃಷ್ಟಿಸುವ ಮೂಲಕ ದೇಹವನ್ನು ಅಲುಗಾಡಿಸುವುದರ ಮೂಲಕ, ಧ್ವನಿಗಳನ್ನು ಹೊರಡಿಸುವಂತೆ ಮೂಡಿಸುವುದು.

೫. ಅಂಗನವಾಡಿಯಲ್ಲಿ ಸೂಕ್ತ ಮನೋಭಾವ ಮತ್ತು ಅಭಿರುಚಿಗಳನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತಾರೆ.

೬. ಮಕ್ಕಳ ಬೌದ್ಧಿಕತೆಯನ್ನು ಬೆಳೆಸಿಕೊಳ್ಳಲು ಮತ್ತು ಅವರು ಶಾಲೆಯಲ್ಲಿ ವರ್ಗಗಳ, ಮಾದರಿಗಳ, ಶೈಕ್ಷಣಿಕಗಳ, ಸಂಖ್ಯೆಯ ಆಟ ಮುಂತಾದವುಗಳನ್ನು ತಯಾರಿಸಿಕೊಳ್ಳುವ ಕಾರ್ಯದಲ್ಲಿ ಸಹಾಯ ಮಾಡುವರು.

೭. ಪ್ರತಿದಿನ ವಿವಿಧ ರೀತಿ ಚಟುವಟಿಕೆಗಳನ್ನು ಯೋಜಿಸಿ ಮಕ್ಕಳು ವರ್ಗಗಳಾಗಿ ಅಥವಾ ಪ್ರತ್ಯೇಕವಾಗಿ ಚಟುವಟಿಕೆಗಳಲ್ಲಿ ತೊಡಗಿ ಮಕ್ಕಳ ಜೊತೆ ಆಟವಾಡುವರು.

೮. ಮಕ್ಕಳ ಚಟುವಟಿಕೆಗಳಲ್ಲಿ ಅವರೊಡನೆ ಲವಲವಿಕೆಯಿಂದ ಬೆರೆಯುವರು. ಗುಂಪಿನಿಂದ ಗುಂಪಿಗೆ, ಮಗುವಿನ ಬಳಿ ಹೋಗಿ ಮೆಚ್ಚುಗೆ ನೀಡುವುದು.

**ಆರೋಗ್ಯ ಮತ್ತು ಆಹಾರ ಶಿಕ್ಷಣವನ್ನು ನೀಡುವುದು**

ಗ್ರಾಮೀಣ ಪ್ರದೇಶದ ಜನರು ತಮ್ಮ ಕೆಲಸದ ಭರದಲ್ಲಿ ಊರು, ಆರೋಗ್ಯ, ಸ್ವಚ್ಛತೆ ಕಡೆಗೆ ಗಮನ ಕೊಡುವುದಿಲ್ಲ. ಆದ್ದರಿಂದ ಅಂಗನವಾಡಿ ಕಾರ್ಯಕರ್ತೆಯು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯರು, ಆಯಾ ಗ್ರಾಮಗಳ ಸಮಿತಿಗಳನ್ನು ಕರೆಯುವುದರ ಮೂಲಕ ಉತ್ತಮವಾದ ಆಹಾರವನ್ನು ಸೇವಿಸುವಂತೆ ತಿಳುವಳಿಕೆ ನೀಡುವರು. ಕೊಳೆತ ಕಲುಷಿತ ಆಹಾರವನ್ನು ಸೇವಿಸುವುದರಿಂದ ರೋಗರುಜಿನಗಳು ಬರುತ್ತವೆ ಎಂದು ಅವರಿಗೆ ಎಚ್ಚರಿಕೆ ನೀಡುತ್ತಾರೆ. ಅವರಲ್ಲಿಯೇ ಸಿಗುವ ಆಹಾರ ವಸ್ತುಗಳನ್ನು ಯಾವ ರೀತಿಯಾಗಿ ಬಳಸಬೇಕು ಎಂಬುದರ ಬಗೆಗೆ ತಿಳಿಸಿ ಹೇಳುತ್ತಾರೆ.

**ಅಂಗನವಾಡಿ ಕಾರ್ಯಕರ್ತೆ ಎ.ಡಬ್ಲ್ಯು.ಡಬ್ಲ್ಯು**

೧. ಜನ ಸಮುದಾಯ ಸಮೀಕ್ಷೆಯನ್ನು ಕೈಗೊಂಡು, ಸಹಾಯ ಅಗತ್ಯವಾಗಿರುವಂತಹ ವಿವರಗಳನ್ನು ಸಂಗ್ರಹಿಸುವುದು. ಆರು ವರ್ಷದ ಕೆಳಗಿನ ಮಕ್ಕಳು, ಗರ್ಭಿಣಿ ಮತ್ತು ಹಾಲುಣಿಸುತ್ತಿರುವ ತಾಯಂದಿರು ಇವುಗನ್ನು ಸಂಗ್ರಹಿಸಬೇಕು. ಕುಟುಂಬ ಸಂಖ್ಯೆ, ಕುಟುಂಬದಲ್ಲಿ ಸದಸ್ಯರ ಸಂಖ್ಯೆ, ಕುಟುಂಬದ ಆದಾಯ ಇವುಗಳನ್ನು ಸಂಗ್ರಹಿಸಬೇಕು ಅಂಕಿ ಅಂಶಗಳಾದ ಜನನ ಮರಣಗಳ ದಾಖಲೆಯನ್ನು ಇಡಬೇಕು.

೨. ೩ ಮತ್ತು ೬ ವರ್ಷಗಳ ನಡುವಣ ಮಕ್ಕಳ ಶಾಲಾಪೂರ್ವ ಶಿಕ್ಷಣವನ್ನು ಕೈಗೊಳ್ಳಬೇಕು.

೩. ೦-೬ ವರ್ಷಗಳ ನಡುವಿನ ಮಕ್ಕಳ ಮತ್ತು ಗರ್ಭಿಣಿ ಹಾಗೂ ಹಾಲುಣಿಸುತ್ತಿರುವ ತಾಯಂದಿರಿಗೆ ಅಧಿಕ ಪೋಷಕಾಂಶ ಒದಗುವಂತೆ ಮಾಡುವುದು.

೪. ಪ್ರಾಥಮಿಕ ಆರೋಗ್ಯ ಮತ್ತು ಪ್ರಥಮ ಚಿಕಿತ್ಸೆ ಸೌಲಭ್ಯಗಳನ್ನು ಒದಗಿಸುವುದು.

೫. ರೋಗ, ನಿರೋಧಕ ಚುಚ್ಚುಮದ್ದು ಮತ್ತು ಆರೋಗ್ಯ ತಪಾಸಣೆ ಮಾಡುವಲ್ಲಿ ಆರೋಗ್ಯ ಸಿಬ್ಬಂದಿ ಸಹಾಯ ಮಾಡುವುದು.

೬. ಪ್ರಬಲವಾಗಿ ನ್ಯೂನಪೊಷಣೆಗಳನ್ನು, ಪೋಷಕಾಂಶದ ಅಗತ್ಯವನ್ನು ಅನಾರೋಗ್ಯವುಂಟಾದ ಅಪಾಯದಲ್ಲಿರುವ ಮಕ್ಕಳನ್ನು, ಅಂಟುರೋಗವಿರುವ ರೋಗಿಗಳನ್ನು ತಜ್ಞ ವೈದ್ಯರಲ್ಲಿ ಕಳುಹಿಸಬೇಕು.

೭. ಅಂಗನವಾಡಿ ಕೇಂದ್ರಕ್ಕೆ ಬರುವ ಗರ್ಭಿಣಿ ಮತ್ತು ಹಾಲುಣಿಸುತ್ತಿರುವ ತಾಯಂದಿರಿಗೆ ಅಂಗನವಾಡಿ ಕಾರ್ಯಕರ್ತೆಯರು ಮನೆ ಭೇಟಿ ಮಾಡುವ ವೇಳೆಯಲ್ಲಿ ಮತ್ತು ಶಿಕ್ಷಣ ಕಾರ್ಯಕ್ರಮ ಕಾಲದಲ್ಲಿ ಆರೋಗ್ಯ ಮತ್ತು ಪೋಷಣೆಗೆ ಸಂಬಂಧಿಸಿದ ತಿಳಿವಳಿಕೆಗಳನ್ನು ಕೊಡಬೇಕು.

೮. ಅಂಗನವಾಡಿಗೆ ಬರುವ ತಂದೆ ತಾಯಿಯ ಜೊತೆಯಲ್ಲಿ ಒಳ್ಳೆಯ ಬಾಂಧವ್ಯ ಹೊಂದಿರಬೇಕು.

೯. ತೂಕದ ಕಾರ್ಡುಗಳು, ರಿಜಿಸ್ಟರುಗಳು, ಮಗುವಿನ ಆರೋಗ್ಯ ಪೋಷಣೆಗೆ ಸಂಬಂಧಿಸಿದ ದಾಖಲೆಗಳು, ಅಂಗನವಾಡಿ ಹಾಜರಿ ದಾಖಲೆಗಳು ಇವುಗಳನ್ನು ಬರೆದಿಟ್ಟು ಜನ ಸಮುದಾಯ ಸೇವೆಯ ಉಪಯೋಗವನ್ನು ಸರಿಯಾಗಿ ಪಡೆಯುತ್ತಿದೆಯೇ ಎಂದು ತಿಳಿಯುವಲ್ಲಿ ಸಹಕರಿಸುವುದು.

೧೦. ಗ್ರಾಮದ ಇತರ ಸಂಘ ಸಂಸ್ಥೆಗಳಾದ ಪಂಚಾಯಿತಿ ಮಹಿಳಾ ಮಂಡಲಿಗಳೊಡನೆ ಸಂಪರ್ಕ, ಶಾಲಾ ಉಪಾಧ್ಯಾರೊಡನೆ ಸಂಪರ್ಕ ಮತ್ತು ಕಾರ್ಯಕ್ರಮದ ಯಶಸ್ಸಿಗೆ ಅವರ ಸಹಕಾರ ಸಹಭಾಗಿತ್ವವನ್ನು ಕೋರುವುದು.

೧೧. ೧೫-೪೫ ವರ್ಷಗಳ ವಯಸ್ಸಿನ ಹೆಂಗಸರ ಅಕ್ಷರ ಕಲಿಕೆ ಕಾರ್ಯಕ್ರಮವನ್ನು ಏರ್ಪಡಿಸಿ ನಡೆಸುವುದು.

### ೩.೩. ಅಂಗನವಾಡಿ ಕಾರ್ಯಕರ್ತೆಯರ ದಿನನಿತ್ಯದ ಚಟುವಟಿಕೆಗಳು

ಅಂಗನವಾಡಿ ಕಾರ್ಯಕರ್ತೆಯರು ಪ್ರತಿ ದಿನ ಮಕ್ಕಳಿಗೆ ಮತ್ತು ತಾಯಂದಿರಿಗೆ ಕೆಲವು ಸೇವೆಗಳನ್ನು ಒದಗಿಸುತ್ತಾರೆ. ಸಮಗ್ರ ಬಾಲವಿಕಾಸ ಸೇವಾ ಯೋಜನೆ ಹಾಕಿಕೊಂಡಿರುವ ಪೂರಕ ಪೌಷ್ಟಿಕ ಆಹಾರ ಹಾಗೂ ಆರೋಗ್ಯ ಶಿಕ್ಷಣ ನೀಡಿಕೆ ಇವೆಲ್ಲವು ಅಂಗನವಾಡಿ ಕಾರ್ಯಕರ್ತೆಯರ ದಿನನಿತ್ಯದ ಕೆಲಸಗಳಾಗುತ್ತವೆ. ಈ ಸೇವೆಗಳನ್ನು ಒದಗಿಸುವುದಕ್ಕಾಗಿ ಪ್ರತಿ ದಿನ ಈ ಕೆಳಕಂಡ ಕೆಲಸ ಕಾರ್ಯಗಳನ್ನು ಮಾಡಬೇಕಾಗಿದೆ.

೧. ಅಂಗನವಾಡಿ ಸ್ವಚ್ಛತೆಯನ್ನು ಕಾಪಾಡಿಕೊಳ್ಳುತ್ತಾರೆ.

೨. ಪೂರಕ ಪೌಷ್ಟಿಕ ಆಹಾರ.

೩. ಶಾಲಾಪೂರ್ವ ಶಿಕ್ಷಣ, ಹೊರಾಂಗಣ ಆಟಗಳು, ೭ ಮುಕ್ತ ಆಟಗಳು, ಓಟ, ನೆಗೆತ ಮಕ್ಕಳನ್ನು ಹೊರ ಸಂಚಾರಕ್ಕೆ ಕರೆದುಕೊಂಡು ಹೋಗುವುದು.

೪. ಮಕ್ಕಳು ಶುಚಿಯಾಗಿರುವ ಬಗ್ಗೆ ಗಮನಿಸುವುದು, ಅನಾರೋಗ್ಯದ ಬೇನೆಗಳಿದ್ದರೆ ಪರಿಶೀಲಿಸುವುದು.

೫. ದಾಖಲೆ ನಿರ್ವಹಣೆ.

೬. ಮನೆ-ಮನೆಗೂ ಭೇಟಿ ನೀಡುವುದು. ವಿಶೇಷವಾಗಿ ಅಪಾಯದ ಸ್ಥಿತಿಯಲ್ಲಿರುವ ಮಕ್ಕಳ ಮತ್ತು ತಾಯಂದಿರ ಕುಟುಂಬಗಳಿಗೆ ಭೇಟಿ ನೀಡುವುದು.

೭. ಸಣ್ಣ ರೋಗಗಳಿಗೆ ಚಿಕಿತ್ಸೆ ನೀಡುವುದು ಮತ್ತು ತೀವ್ರ ಸ್ವರೂಪದ ರೋಗ ಪ್ರಕರಣಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಮಾಹಿತಿ ಸೇವೆಗಾಗಿ ಕಳುಹಿಸುವುದು.

ಸಾಮಾನ್ಯವಾಗಿ ಭೇಟಿಯನ್ನು ಮಧ್ಯಾಹ್ನದ ವೇಳೆಯಲ್ಲಿ ಅಂದರೆ ತಾಯಂದಿರು ತಮ್ಮ ಗೃಹಕೃತ್ಯ ಕೆಲಸಗಳಿಂದ ಬಿಡುವಾಗಿರುವ ಸಮಯದಲ್ಲಿ ಮಾಡುತ್ತಾರೆ.

## ಮಕ್ಕಳ ಆರೋಗ್ಯ ತಪಾಸಣೆ

ಪ್ರತಿ ಅಂಗನವಾಡಿ ಕೇಂದ್ರವು ಮಕ್ಕಳ ಆರೋಗ್ಯ ತಪಾಸಣೆ ಕಾರ್ಯಕ್ರಮಗಳನ್ನು ತಿಂಗಳಿಗೊಮ್ಮೆ ಕೇಂದ್ರದಲ್ಲಿ ಹಮ್ಮಿಕೊಳ್ಳಬೇಕಾದ ನಿಯಮವಿದೆ. ಆರೋಗ್ಯ ತಪಾಸಣೆ ದಿನಾಂಕವನ್ನು ನಿಗದಿಪಡಿಸಲು, ಪ್ರತಿ ತಿಂಗಳು ಯೋಜನಾಧಿಕಾರಿಗಳು, ವೈದ್ಯಾಧಿಕಾರಿಗಳು, ಮೇಲ್ವಿಚಾರಕಿಯರು, ಜಂಟಿ ಭೇಟಿಯ ಕಾರ್ಯಕ್ರಮ ನಿಗದಿಪಡಿಸಿಕೊಳ್ಳಬೇಕು. ತಪಾಸಣಾ ಸಮಯಕ್ಕೆ ಅಗತ್ಯವಾದ ರೋಗ ನಿರೋಧಕ ಚುಚ್ಚುಮದ್ದು, ಔಷಧಿಗಳು ಸಾಕಷ್ಟು ಪ್ರಮಾಣದಲ್ಲಿ ದಾಸ್ತಾನಿರುವಂತೆ ಆಯಾ ತಾಲ್ಲೂಕಿನ ಇಲ್ಲವೆ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ಅಣಿಗೊಳಿಸಬೇಕಾಗುತ್ತದೆ. ಈ ನಿಯಮದಂತೆ ಕಾರ್ಯಕ್ರಮಗಳು ನಡೆದಿದ್ದೇ ಆಗಿದ್ದರೆ ಪೂರ್ಣಪ್ರಮಾಣದಲ್ಲಿ ಮಕ್ಕಳ ಆರೋಗ್ಯವನ್ನು ಸಾಧಿಸಬಹುದಾಗಿದೆ.

ಈ ಅರಿವಿನ ಕಾರ್ಯಕ್ರಮದ ಅನುಷ್ಠಾನದಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ನೆರವು ನೀಡಲು ಗ್ರಾಮ ಪಂಚಾಯತಿಗಳು ಮಹಿಳಾ ಸದಸ್ಯರನ್ನೊಳಗೊಂಡಿರುವ ಅಂಗನವಾಡಿ ಮಟ್ಟದ ಸಮಿತಿಗಳನ್ನು ರಚಿಸಬೇಕಾಗುತ್ತದೆ. ಅಂಗನವಾಡಿ ಕೇಂದ್ರಗಳಿಗೆ ವೈದ್ಯಾಧಿಕಾರಿಗಳ ಕ್ರಮವಾಗಿ ಬೇಟಿ ನೀಡುವುದಕ್ಕೆ ಒತ್ತಾಯ ನೀಡಬೇಕಾಗುತ್ತದೆ. ಮಕ್ಕಳ ಔಷಧಿಗಳನ್ನು ಹಾಗೂ ವಿಟಮಿನ್ ಗುಳಿಗೆಗಳನ್ನು ಸರಬರಾಜು ಮಾಡಿ ವೈದ್ಯಾಧಿಕಾರಿಗಳು ಅಂಗನವಾಡಿ ಮಕ್ಕಳು ಆರೋಗ್ಯವಂತರಾಗಿರುವಂತೆ ನೋಡಿಕೊಳ್ಳಬೇಕು. ಹಾಗೆಯೇ ಮಕ್ಕಳಲ್ಲಿ ಕಂಡು ಬರುವ ದೈಹಿಕ ವೈಕಲ್ಯತೆಯನ್ನು ಪ್ರಾರಂಭಿಕ ಹಂತದಲ್ಲಿಯೇ ಗುರುತಿಸಿ ತೊಂದರೆಗೀಡಾದ ಮಕ್ಕಳಿಗೆ ಸೂಕ್ತ ಸಲಹೆ ಮತ್ತು ವೈದ್ಯಕೀಯ ಸೇವೆಯ ವ್ಯವಸ್ಥೆಯನ್ನು ಮಾಡಬೇಕೆಂಬ ನಿಯಮಗಳನ್ನು ವಿಧಿಸಲಾಗಿದೆ.

ಈ ಎಲ್ಲ ನಿಯಮಗಳನ್ನು ಸಮರ್ಪಕವಾಗಿ ಪಾಲಿಸಲಾಗುತ್ತಿದೆಯೇ ಎನ್ನುವುದನ್ನು ಗಮನಿಸಿದರೆ ಎಲ್ಲಿಯೂ ಕ್ರಮ ಪ್ರಕಾರವಾಗಿ ನಡೆಯುದಿರುವುದು ತಿಳಿದು ಬರುತ್ತಿಲ್ಲ. ವಿಶೇಷವಾಗಿ ವೈದ್ಯಕೀಯ ಸೇವೆ, ವೈದ್ಯಕೀಯ ಪರೀಕ್ಷೆ ಸಮರ್ಪಕವಾಗಿ ಎಲ್ಲಿಯೂ ನಡೆಯುವುದಿಲ್ಲ. ಭಾರತದಲ್ಲಿ ೧೨ ತಿಂಗಳಿಗಿಂತ ಕೆಳಗಿನ ಶೇ. ೮೫.೭ರಷ್ಟು ಮಕ್ಕಳ ಅಂಗನವಾಡಿ ಕೇಂದ್ರಗಳಿಂದ ಯಾವುದೇ ಆರೋಗ್ಯ ಪರೀಕ್ಷೆ

ಒಳಗಾಗಿಲ್ಲದಿರುವುದನ್ನು ಎನ್.ಎಫ್.ಎಚ್.ಎಸ್-೩ ವರದಿ ಮಾಡಿದೆ. ಹೀಗಾಗಿ ಗ್ರಾಮೀಣ ಜನರಿಗೆ ಹೆಚ್ಚಿನ ಅರಿವು ಮೂಡಿಸಬೇಕಾಗುತ್ತದೆ. ಸಮಗ್ರ ಶಿಶು ಅಭಿವೃದ್ಧಿ ಸೇವೆಗಳ ಯೋಜನೆಯು ವಿಶ್ವದ ಇಂದಿನ ಅತಿ ದೊಡ್ಡ ಹಾಗೂ ವ್ಯಾಪಕವಾಗಿ ಸ್ವೀಕೃತವಾಗಿರುವ ಕಾರ್ಯಕ್ರಮವಾಗಿದೆ. ಈ ಕಾರ್ಯಕ್ರಮವು ಅತ್ಯಂತ ಸಮಗ್ರ ಹಾಗೂ ಪರಿಪೂರ್ಣತೆಯಿಂದ ಕೂಡಿದ್ದು ಶಿಶು ಉಳಿವಿಗೆ ಮತ್ತು ಶಿಶು ಅಭಿವೃದ್ಧಿ ಯೋಜನೆಯ ಮೂಲಕ ಆರೋಗ್ಯ ಪೌಷ್ಟಿಕತೆ ಹಾಗೂ ಶಾಲಾಪೂರ್ವ ಮಕ್ಕಳ ಕಲಿಯುವಿಕೆ ಮತ್ತು ತಾಯಂದಿರಿಗೆ ತಮ್ಮ ಆರೋಗ್ಯ ವರ್ಧನೆಗೆ ಸಮಾನಾಂತರವಾಗಿ ಅವಶ್ಯಕ ಸೇವೆಗಳನ್ನು ಗ್ರಾಮೀಣ ಮಟ್ಟದಲ್ಲಿ ಒದಗಿಸುತ್ತಿದೆ.

ಈ ಯೋಜನೆಯಡಿ ದೊರೆಯುವ ಸೇವಾ ಸೌಲಭ್ಯಗಳಾದ ಪೂರಕ ಪೌಷ್ಟಿಕ ಆಹಾರ, ಚುಚ್ಚುಮದ್ದು, ಆರೋಗ್ಯ ತಪಾಸಣೆ, ನೈರ್ಮಲ್ಯ, ಚಿಕ್ಕಪುಟ್ಟ ಕಾಯಿಲೆಗಳಿಗೆ ಉಪಚಾರ, ಪೌಷ್ಟಿಕತೆಯ ಬಗ್ಗೆ ತಿಳುವಳಿಕೆ ಮತ್ತು ಶಾಲಾಪೂರ್ವ ಶಿಕ್ಷಣ (೨-೬ ವರ್ಷದೊಳಗಿನ ಮಕ್ಕಳಿಗೆ) ಮುಂತಾದವುಗಳಾಗಿವೆ.

ಅಪೌಷ್ಟಿಕತೆ ಕಾರಣದಿಂದ ಮರಣ ಹೊಂದುವ ಶಿಶುಗಳ ಸಂಖ್ಯೆ ತಗ್ಗಿಸಲು ಮತ್ತು ಗರ್ಭಿಣಿ ಬಾಣಂತಿ ಹಾಗೂ ಮಕ್ಕಳಿಗೆ ಬೇಕಾಗುವ ಪೌಷ್ಟಿಕಾಂಶವುಳ್ಳ ಆಹಾರವನ್ನು ಪೂರೈಸುವ ಉದ್ದೇಶದಿಂದ ೧೯೭೫ರ ಮಾರ್ಚ್ ತಿಂಗಳಲ್ಲಿ ಐ.ಸಿ.ಐ.ಎಸ್. ಕಾರ್ಯಕ್ರಮವನ್ನು ಭಾರತ ಸರ್ಕಾರವು ಜಾರಿಗೆ ತಂದಿತು. ಇದು ಸಂಪೂರ್ಣ ಕೇಂದ್ರ ಪುರಸ್ಕೃತ ಯೋಜನೆಯಾಗಿರುತ್ತದೆ. ಈ ಕಾರ್ಯಕ್ರಮ ಆರು ಉದ್ದೇಶಗಳನ್ನಿಟ್ಟುಕೊಂಡು ಅನುಷ್ಠಾನಗೊಂಡಿತು. ಅವು

೧. ೬ ತಿಂಗಳಿಂದ ೬ ವರ್ಷ ವಯೋಮಿತಿಯ ಮಕ್ಕಳ ಪೌಷ್ಟಿಕತೆ ಮಟ್ಟ ಹಾಗೂ ಆರೋಗ್ಯ ಸ್ಥಿತಿಯನ್ನು ಉತ್ತಮಪಡಿಸುವುದು.

೨. ಶಿಶುಗಳ ಮಾನಸಿಕ, ಸಾಮಾಜಿಕ, ದೈಹಿಕ, ಸಮರ್ಪಕ ಬೆಳವಣಿಗೆ ಅಡಿಪಾಯ ರೂಪಿಸುವುದು.

೩. ಶಿಶುಮರಣ ದರ, ಅಪೌಷ್ಟಿಕತೆಯನ್ನು ತಗ್ಗಿಸುವುದು.

೪. ರೋಗನಿವಾರಣಾ ಹಾಗೂ ಶಾಲೆಗೆ ಸೇರಲು ಮಕ್ಕಳನ್ನು ತಯಾರುಗೊಳಿಸುವುದು.

೫. ಮಗುವಿನ ಸರ್ವಾಂಗೀಣ ಅಭಿವೃದ್ಧಿಗೆ ಇತರೆ ಇಲಾಖೆಗಳೊಂದಿಗೆ ಪರಿಣಾಮಕಾರಿಯಾದ ಸಮನ್ವಯತೆಯನ್ನು ಸಾಧಿಸುವುದು.

೬. ಆರೋಗ್ಯ ಶಿಕ್ಷಣ ನೀಡುವ ಮೂಲಕ ತಾಯಂದಿರಲ್ಲಿ ಅಪೌಷ್ಟಿಕ ಹಾಗೂ ಆರೋಗ್ಯ ಅಗತ್ಯತೆಗಳನ್ನು ಪೂರೈಸುವಲ್ಲಿ ಸಬಲರನ್ನಾಗಿ ಮಾಡುವುದಾಗಿದೆ.

ಇಂದಿಗೂ ಅಪೌಷ್ಟಿಕತೆಯ ಕಾರಣದಿಂದ ಮರಣ ಹೊದುವ ಶಿಶುಗಳ ಸಂಖ್ಯೆ ಹೆಚ್ಚಾಗಿ ಕಂಡುಬರುತ್ತಿದೆ. ಬಡತನ ರೇಖೆಯ ಕೆಳಗಿನ ವರ್ಗವನ್ನು ಗಮನದಲ್ಲಿಟ್ಟುಕೊಂಡು ಅವರಲ್ಲಿನ ಗರ್ಭಿಣಿಯರು, ಬಾಣಂತಿಯರು, ೬ ತಿಂಗಳಿಂದ ೬ ವರ್ಷದೊಳಗಿನ ಮಕ್ಕಳುಗಳಿಗೆ ಈ ಕೆಳಕಂಡ

ಸೇವೆಗಳನ್ನು ಶಿಶು ಅಭಿವೃದ್ಧಿ ಯೋಜನೆಯ ಅಂಗನವಾಡಿ ಕೇಂದ್ರಗಳ ಮುಖಾಂತರ ಸವಲತ್ತನ್ನು ಪಡೆಯುವ ವ್ಯವಸ್ಥೆಯನ್ನು ಮಾಡಲಾಗಿದೆ.

ಎ. ಪೂರಕ ಪೌಷ್ಟಿಕ ಆಹಾರ ವಿತರಣೆ.

ಬಿ. ಆರೋಗ್ಯ ತಪಾಸಣೆ ಮಾಹಿತಿ ಸೇವೆ.

ಸಿ. ಆರೋಗ್ಯ ಮತ್ತು ಪೌಷ್ಟಿಕಾಂಶದ ಶಿಬಿರ.

ಡಿ. ರೋಗ ನಿರೋಧಕ ಚುಚ್ಚುಮದ್ದು ನೀಡುವುದು.

ಇ. ಶಾಲಾಪೂರ್ವ ಶಿಕ್ಷಣ ನೀಡುವುದು.

ಈ ಎಲ್ಲ ಯೋಜನೆಗಳು ಸರಕಾರ ಬೇರೆ ಬೇರೆ ಇಲಾಖೆಗಳ ಸಹಯೊಗದೊಂದಿಗೆ ನಡೆಯುತ್ತವೆ.

ಹುಟ್ಟಿದ ಮೊದಲ ಮೂರು ಮಕ್ಕಳು ಬದುಕುಳಿಯುತ್ತವೆ ಎಂಬ ವಿಶ್ವಾಸ ಜನತೆಗೆ ಎಲ್ಲಿಯವರೆಗೂ ಬರುವುದಿಲ್ಲವೋ ಅಲ್ಲಿಯವರೆಗೆ ಕುಟುಂಬ ಯೋಜನಾ ಕಾರ್ಯಕ್ರಮವು ನಿರ್ದಿಷ್ಟ ಗುರಿ ಸಾಧಿಸಲಾರದು ಎಂಬುದನ್ನು ಸರಕಾರ ಮನಗಂಡಿತು. ಅದಕ್ಕಾಗಿ ಮಕ್ಕಳ ಮತ್ತು ಅವು ಬದುಕುಳಿಯುವ ಸಾಧ್ಯತೆಯನ್ನು ಹೆಚ್ಚಿಸುವ ಸಲುವಾಗಿ ಯೋಜನೆಯೊಂದರ ಅಗತ್ಯತೆ ಇದೆ ಎಂಬುದು ಸರಕಾರಕ್ಕೆ ಮನವರಿಕೆಯಾಯಿತು. ಅದಕ್ಕಾಗಿ ಕನಿಷ್ಠ ಅಗತ್ಯ ಕಾರ್ಯಕ್ರಮ ಎಂ.ಎನ್.ಪಿ ೨೦ ಅಂಶಗಳ ಕಾರ್ಯಕ್ರಮಗಳಲ್ಲಿ ೧೫ನೇ ಅಂಶಗಳ ಕಾರ್ಯಕ್ರಮವಾಗಿ "ಸಮಗ್ರ ಬಾಲವಿಕಾಸ ಸೇವಾ ಯೋಜನೆ"ನ್ನು ೧೯೭೫ರಲ್ಲಿ ಕಾರ್ಯಾಚರಣೆಗೆ ತರಲಾಯಿತು. ಇವು ಕೂಡ ಅಂಗನವಾಡಿ ಕೇಂದ್ರಗಳ ಮೂಲಕ ಕಾರ್ಯಾಚರಣೆ ನಡೆಸಲು ಸೂಚಿಸಲಾಯಿತು.

ಅಂಗನವಾಡಿ ಕಾರ್ಯಕರ್ತೆಯರಿಗೆ ಹೆಚ್ಚಿನ ಜವಾಬ್ದಾರಿಯಾದ ಮಕ್ಕಳ ಅದರಲ್ಲೂ ಪ್ರಾಯಪೂರ್ವ ಬಾಲಕಿಯರ ಆರೋಗ್ಯ ಮತ್ತು ಶಿಕ್ಷಣಕ್ಕೆ ನಿರ್ದಿಷ್ಟ ಗಮನ ನೀಡಬೇಕು. ಪ್ರಾಯಪೂರ್ವ ಬಾಣಂತಿಯರಿಗೆ ಕೆಲವು ವೃತ್ತಿಪರ ತರಬೇತಿಗಳನ್ನು ನೀಡಬೇಕು. ಕೆಲವು ಮುಖ್ಯ ವಿಷಯಗಳಾದ ೨೧ ವರ್ಷದವರೆಗೆ ಮದುವೆಯನ್ನು ಮುಂದೂಡುವಿಕೆ ಒಂದು ಅಥವಾ ಎರಡು ವಿನ್ಯಾಸವನ್ನು ಪ್ರಚಾರ ಪಡಿಸುವುದು, ಜನನ ಅಂತರವನ್ನು ವಲಯ ವರ್ಷಕ್ಕೆ ಹೆಚ್ಚಿಸುವುದು, ಇವುಗಳಲ್ಲಿ ಜಿಲ್ಲಾ ಪರಿಷತ್ತು, ತಾಲ್ಲೂಕು ಪಂಚಾಯತ್, ಗ್ರಾಮಪಂಚಾಯತಿಗಳು ಹೆಚ್ಚಿನ ಆಸಕ್ತಿ ವಹಿಸಬೇಕಾಗುತ್ತವೆ.

ಉಪಾಹಾರ ವಿತರಣೆಯು ೩೦೦ ದಿನಗಳಿಗಿಂತ ಕಡಿಮೆಯಾಗದಂತೆ ಹಾಗೂ ಅಂಗನವಾಡಿ ಕಾರ್ಯಕರ್ತೆಯ ಮಹಿಳೆಯೆಂದು ಉದಾಸೀನ ಮಾಡದೆ ಅವರ ಕೆಲಸಗಳಿಗೆ ಸಾಧ್ಯವಾದ ಮಟ್ಟಕ್ಕೆ ಬೆಂಬಲ ನೀಡಬೇಕಾಗುತ್ತದೆ. ಜಿಲ್ಲಾ ಪಂಚಾಯ್ತಿಗಳು, ತಾಲ್ಲೂಕು ಪಂಚಾಯ್ತಿಗಳು ಮತ್ತು ಗ್ರಾಮ ಪಂಚಾಯ್ತಿಗಳು ಸಮಾಜ ಮತ್ತು ಕುಟುಂಬಗಳಲ್ಲಿ ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಕೊನೆಯ ಆದ್ಯತೆ ನೀಡುವ ಬಗ್ಗೆ ಮತ್ತು ಬಾಲಕಿಯರನ್ನು ಅಲಕ್ಷಿಸುವ ಬಗ್ಗೆ ಸರಿಯಾದ ಜ್ಞಾನ ಅವರಲ್ಲಿ ಮೂಡಿಸುವ ಕೆಲಸ ಅಂಗನವಾಡಿ ಕಾರ್ಯಕರ್ತೆಯರದಾಗಿರುತ್ತದೆ.

## ಅಂಗನವಾಡಿ ಕೇಂದ್ರದ ಕರ್ತವ್ಯ ಮತ್ತು ವಿನ್ಯಾಸ

ಪ್ರಸ್ತುತ ಬಾಲವಿಕಾಸ ಯೋಜನೆ ಅಥವಾ ಅಂಗನವಾಡಿಗಳನ್ನು ರಾಜ್ಯದ ಎಲ್ಲ ತಾಲ್ಲೂಕಿನ ಎಲ್ಲ ಗ್ರಾಮಗಳಿಗೆ ವಿಸ್ತರಿಸಲಾಗದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಪ್ರತಿ ೧೦೦೦ ಜನಸಂಖ್ಯೆಗೆ ಒಂದು ಹಾಗೂ ಗುಡ್ಡಗಾಡು ಪ್ರದೇಶದಲ್ಲಿ ೭೫೦ ಜನಸಂಖ್ಯೆಗೆ ಒಂದು ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಗುತ್ತದೆ. ಅಂಗನವಾಡಿ ಕೇಂದ್ರಗಳು ಬೆಳಗ್ಗೆ ೯.೩೦ ಗಂಟೆಯಿಂದ ೧.೩೦ ಗಂಟೆಯವರೆಗೆ ವಾರದ ಎಲ್ಲ ದಿನಗಳಲ್ಲಿ ಭಾನುವಾರವನ್ನು ಹೊರತುಪಡಿಸಿ ಕಾರ್ಯ ನಿರ್ವಹಿಸುತ್ತವೆ. ಈ ಕೇಂದ್ರಗಳಿಂದ ೬ ವರ್ಷಕ್ಕಿಂತ ಕೆಳಗಿರುವ ಮಕ್ಕಳ ಹಾಗೂ ಗರ್ಭಿಣಿಯರು, ಹಾಲುಣಿಸುವ ತಾಯಂದಿರು ಪ್ರತಿನಿತ್ಯ ಪೂರಕ ಪೌಷ್ಟಿಕ ಆಹಾರವನ್ನು ಪಡೆಯಬಹುದಾಗಿದೆ. ಈ ಕೇಂದ್ರಗಳಲ್ಲಿ ಶಾಲಾಪೂರ್ವ ಮಕ್ಕಳು, ೩ ವರ್ಷದಿಂದ ೬ ವರ್ಷಗಳವರೆಗಿನ ಮಕ್ಕಳಿಗೆ ಅನೌಪಚಾರಿಕ ಶಿಕ್ಷಣವನ್ನು ನೀಡುವ ಕ್ರಮವಿದೆ. ಜೊತೆಗೆ ಅಂಗನವಾಡಿ ಕಾರ್ಯಕರ್ತೆಯರು ಹೊಸದಾಗಿ ಜನಿಸಿದ ಮಗುವಿನ ಮನೆಗೆ ತೆರಳಿ ತಾಯಿ ಮತ್ತು ಪೋಷಕರೊಡನೆ ಆರೋಗ್ಯ ಮತ್ತು ಪೌಷ್ಟಿಕತೆ ಕುರಿತು ಹಾಗೂ ಮಗುವಿನ ತೂಕ ಮತ್ತು ಬೆಳವಣಿಗೆ ಕುರಿತು ತಿಳುವಳಿಕೆ ನೀಡಬೇಕಾಗುತ್ತದೆ. ಈ ಅಂಗನವಾಡಿ ಕಾರ್ಯಕರ್ತೆಯನ್ನು ಜಿಲ್ಲಾ ಮಟ್ಟದ ಅಭಿವೃದ್ಧಿ ಅಧಿಕಾರಿ ನೇಮಕ ಮಾಡುತ್ತಾರೆ. ಆಯ್ಕೆಯಾದವರಿಗೆ ೬ ತಿಂಗಳ ವಸತಿಯುತ ತರಬೇತಿಯನ್ನು ನೀಡಲಾಗುತ್ತದೆ. ತರಬೇತಿಯನ್ನು ರಾಜ್ಯ ಸರಕಾರ ಆಯಾ ಜಿಲ್ಲಾ ಕೇಂದ್ರಗಳಲ್ಲಿ ನೀಡುತ್ತದೆ.

ಈ ಅಂಗನವಾಡಿ ಕೇಂದ್ರಗಳನ್ನು ನೋಡಿಕೊಳ್ಳಲು ಜಿಲ್ಲಾ ಮಟ್ಟದಲ್ಲಿ ಉಪ ನಿರ್ದೇಶಕರು ಇರುತ್ತಾರೆ. ಜೊತೆಗೆ ಜಿಲ್ಲಾ ಮಟ್ಟದಲ್ಲಿ ಸಂಸ್ಥೆಯ ಪರಿವೀಕ್ಷಣಾಧಿಕಾರಿಗಳು, ಬಾಲಸೇವಾ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಸಹಾಯಕ ಶಿಶು ಅಭಿವೃದ್ಧಿ ಯೋಜನಾಧಿಕಾಗಳು, ಮೇಲ್ವಿಚಾರಕಿಯರು, ಅಂಗನವಾಡಿ ಕಾರ್ಯಕರ್ತೆಯರು, ಅಂಗನವಾಡಿ ಸಹಾಯಕಿಯರನ್ನೊಳಗೊಂಡು ಶ್ರೇಣೀಕೃತ ವ್ಯವಸ್ಥೆಯನ್ನು ಇದು ಒಳಗೊಂಡಿದೆ.

ಅಂಗನವಾಡಿ ಕಾರ್ಯಕರ್ತೆಯರ ಮತ್ತೊಂದು ಜವಾಬ್ದಾರಿ ಸ್ತ್ರೀಶಕ್ತಿ ಗುಂಪು ರಚನೆಯ ಕೆಲಸ. ಸರಕಾರವು ಮಹತ್ವದ ನಾಲ್ಕು ಉದ್ದೇಶವನ್ನಿಟ್ಟುಕೊಂಡು ಈ ಸ್ತ್ರೀ ಶಕ್ತಿ ಗುಂಪು ಯೋಜನೆಯನ್ನು ಜಾರಿಗೆ ತಂದಿದೆ. ಅವು

೧. ಗ್ರಾಮೀಣ ಪ್ರದೇಶದಲ್ಲಿ ಬಡತನ ರೇಖೆಗಿಂತ ಕೆಳಗೆ ವಾಸಿಸುತ್ತಿರುವ ಮಹಿಳೆಯರಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಮೂಡಿಸುವಂತಹ ಪ್ರಕ್ರಿಯೆಯನ್ನು ಬಲಪಡಿಸುವುದು.

೨. ರಾಜ್ಯದಲ್ಲಿ ೧.೨೦ ಲಕ್ಷ ಸ್ವಸಹಾಯ ಗುಂಪುಗಳನ್ನು ರಚಿಸಿ ೨೦ ಲಕ್ಷ ಮಹಿಳೆಯರನ್ನು ಸಂಘಟಿಸುವುದರ ಮುಖಾಂತರ ಅವರಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆ ಮೂಡಿಸಿ ಸಂಪನ್ಮೂಲಗಳ ಹತೋಟಿ, ಸಂಪನ್ಮೂಲಗಳಿಗೆ ದಾರಿಯನ್ನು ಸಾಧಿಸುವಂತೆ ಮಾಡುವುದು.

೩. ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ ಬಡ ಮಹಿಳೆಯರ ಆದಾಯವನ್ನು ಹೆಚ್ಚಿಸಿ ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮೂಡಿಸುವುದು, ತನ್ಮೂಲಕ ಬಡತನ ನಿವಾರಣೆ ಮಾಡುವುದು.

೪. ವಿವಿಧ ಇಲಾಖೆಗಳ ಸೇವೆಗಳನ್ನು ಒಮ್ಮುಖಗೊಳಿಸುವುದರ ಮೂಲಕ ಮಹಿಳಾ ಗುಂಪಿನ ಸದಸ್ಯರಿಗೆ ವಿವಿಧ ಇಲಾಖೆಗಳ ಅಭಿವೃದ್ಧಿ ಕಾರ್ಯಕ್ರಮಗಳ ಸೌಲಭ್ಯ ದೊರೆಯುವಂತೆ ಅವಕಾಶ ಕಲ್ಪಿಸುವುದು ಹಾಗೂ ಸಾಲ ನೀಡುವಂತಹ ಸಂಸ್ಥೆಗಳೊಡನೆ ಸಂಪರ್ಕ ಕಲ್ಪಿಸಿ ಈ ಮಹಿಳೆಯರಿಗೆ ಸಾಲ ದೊರೆಯುವಂತೆ ಕ್ರಮ ಕೈಗೊಳ್ಳುವುದು ಆಗಿದೆ.

ಫಲಾನುಭವಿಗಳಿಗೆ ಅಂಗನವಾಡಿ ಕೇಂದ್ರಗಳಲ್ಲಿ ವಿತರಿಸಲಾಗುತ್ತಿರುವ ಪೂರಕ ಪೌಷ್ಟಿಕ ಆಹಾರ ವಿವರ ಕೆಳಕಂಡಂತಿರುತ್ತಿವೆ.

೧. ೬ ತಿಂಗಳಿನಿಂದ ೩ ವರ್ಷದ ಮಕ್ಕಳಿಗೆ ಅಮ್ಮೈಲೆಸಯುಕ್ತ ಶಕ್ತಿಯುತ ಆಹಾರವನ್ನು ವಾರದ ೬ ದಿನಗಳು ನೀಡಲಾಗುತ್ತಿದೆ.

೨. ೩-೬ ವರ್ಷದ ಮಕ್ಕಳಿಗೆ ವಾರದ ೨ ದಿನಗಳಲ್ಲಿ ಅಮ್ಮೈಲೆಸಯುಕ್ತ ಶಕ್ತಿಯುತ ಆಹಾರ ಮತ್ತು ನಾಲ್ಕು ದಿನಗಳ ಅಕ್ಕಿಯಿಂದ ತಯಾರಿಸಿದ ಆಹಾರವನ್ನು ನೀಡಲಾಗುತ್ತಿದೆ.

೩. ಗರ್ಭಿಣಿ ಬಾಣಂತಿಯರಿಗೆ ಪ್ರತಿ ದಿನ ೩.೦೦ ರೂ ಮೌಲ್ಯದ ಆಹಾರ ನೀಡುವುದು, ಅಕ್ಕಿ ಹೆಸರುಕಾಳನ್ನು ಹಾಗೂ ಶಕ್ತಿಯುತ ಆಹಾರವನ್ನು ಇವರಿಗೆ ವಾರಕ್ಕೆ ಒಂದು ಬಾರಿ ವಿತರಿಸಿ ಮನೆಗೆ ತೆಗೆದುಕೊಂಡು ಹೋಗಲು ನೀಡಲಾಗುತ್ತಿದೆ.

೨೦೦೮೯ನೇ ಸಾಲಿನಲ್ಲಿ ಗುಲಬರ್ಗಾ ನಗರ ಯೋಜನೆಯ ಅಂಗನವಾಡಿ ಕೇಂದ್ರಗಳ ಫಲಾನುಭವಿಗಳಿಗೆ ವಿತರಿಸುವ ಉಪ ಹಾರದ ತಃಖ್ತೆ

## ಫಲಾನುಭವಿಗಳ ವಿವರ

| ಕ್ರ. ಸಂ. | ವಾರ | ೬ ತಿಂಗಳಿಂದ ೩ ವರ್ಷದ ಮಕ್ಕಳು | ೩ರಿಂದ ೬ ವರ್ಷದ ಮಕ್ಕಳು | ಗರ್ಭಿಣಿ ಬಾಣಂತಿಯರು | ಕಿಶೋರಿಯರು | ಅಂ.ಕಾ.ಕ ಅಂ.ಸಹಾಯಕಿ | ೩ ಮತ್ತು ೪ನೇ ದರ್ಜೆ ಮಕ್ಕಳು | ಷರಾ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧. | ಸೋಮವಾರ | ಪ್ರತಿ ಮಗುವಿಗೆ<br>ಪ್ರತಿ ದಿವಸ<br>೭೫ ಗ್ರಾಂ.ನಂತೆ<br>೧ ದಿವಸ ಸೂತ್ರ<br>ಒಂದರ ಆಹಾರ<br>೧ ದಿವಸ ಸೂತ್ರ<br>ಎರಡರ ಆಮಲೈಸ್<br>ಮನೆಗೆ ನೀಡುವುದು | ಚಿತ್ರಾನ್ನ<br>ಅಕ್ಕಿ ೭೫ ಗ್ರಾಂ<br>ಕಡಲೆಬೇಳೆ ೧೦ಗ್ರಾಂ<br>ಮೆಣಸಿನಕಾಯಿ ೧ಗ್ರಾಂ<br>ಸಾಸಿವೆ ೧ ಗ್ರಾಂ<br>ಎಣ್ಣೆ ೩ ಗ್ರಾಂ<br>ಉಪ್ಪು ೨ ಗ್ರಾಂ<br>ಹೆಸರುಕಾಳು ೨೫ ಗ್ರಾಂ<br>ಹೆಸರುಕಾಳು ಮೊಳಕೆ<br>ಬರಿಸಿ ನೀಡುವುದು | ಪ್ರತಿ ತಿಂಗಳು<br>ಹೆಸರುಕಾಳು ೧ಕೆ.ಜಿ.<br>ಗೋದಿ ೨ ಕೆ.ಜಿ.<br>ಆಮುಲೈಸ್ ಆಹಾರ<br>೧ ಕೆ.ಜಿ.ಮನೆಗೆ<br>ಕೊಡುವುದು. | ಚಿತ್ರಾನ್ನ<br>ಅಕ್ಕಿ ೭೫ ಗ್ರಾಂ<br>ಕಡಲೆಬೇಳೆ ೧೦ ಗ್ರಾಂ<br>ಮೆಣಸಿನಕಾಯಿ ೧ ಗ್ರಾಂ<br>ಸಾಸಿವೆ ೧ ಗ್ರಾಂ<br>ಎಣ್ಣೆ ೩ ಗ್ರಾಂ<br>ಉಪ್ಪು ೨ ಗ್ರಾಂ<br>ಹೆಸರುಕಾಳು ೪೫ ಗ್ರಾಂ<br>ಹೆಸರುಕಾಳು ಮೊಳಕೆ<br>ಬರಿಸಿ ನೀಡುವುದು | ಚಿತ್ರಾನ್ನ<br>ಅಕ್ಕಿ ೭೫ ಗ್ರಾಂ<br>ಕಡಲೆಬೇಳೆ ೧೦ ಗ್ರಾಂ<br>ಮೆಣಸಿನಕಾಯಿ ೧ ಗ್ರಾಂ<br>ಸಾಸಿವೆ ೧ ಗ್ರಾಂ<br>ಎಣ್ಣೆ ೩ ಗ್ರಾಂ<br>ಉಪ್ಪು ೨ ಗ್ರಾಂ<br>ಹೆಸರುಕಾಳು ೪೫ ಗ್ರಾಂ<br>ಹೆಸರುಕಾಳು ಮೊಳಕೆ<br>ಬರಿಸಿ ನೀಡುವುದು | ೨ ಪಟ್ಟು ಆಹಾರ<br>ನೀಡುವುದು. | ಅಂಗನವಾಡಿ<br>ಕಾರ್ಯಕರ್ತೆಯರು<br>ತಮ್ಮಲ್ಲಿ<br>ಲಭ್ಯವಿರುವ<br>ಆಹಾರ ಸಾಸಗ್ರಿಗಳನ್ನು<br>ಉಪಾಹಾರ ನೀತಿಯಲ್ಲಿ<br>ವ್ಯತ್ಯಯ ಉಂಟಾಗದಂತೆ<br>ಬಳಸಿಕೊಳ್ಳಬಹುದು. |

| | | | |
|---|---|---|---|
| ೨ ಮಂಗಳವಾರ | ಸಿಹಿ ತಿಂಡಿ | ಗೋಧಿ ೧೫೦ ಗ್ರಾಂ | ಗೋಧಿ ೧೫೦ ಗ್ರಾಂ |
| | ಗೋಧಿ ೧೦೦ ಗ್ರಾಂ | ಬೆಲ್ಲ ೧೪೦ ಗ್ರಾಂ | ಬೆಲ್ಲ ೧೪೦ ಗ್ರಾಂ |
| | ಬೆಲ್ಲ ೮೦ ಗ್ರಾಂ | ಕಡಲೆಬೇಳೆ ೧೫ ಗ್ರಾಂ | ಕಡಲೆಬೇಳೆ ೧೫ ಗ್ರಾಂ |
| | ಕಡಲೆಬೇಳೆ ೧೫ಗ್ರಾಂ | | |
| ೩. ಬುಧವಾರ | ಚಿತ್ರಾನ್ನ | ಚಿತ್ರಾನ್ನ | ಚಿತ್ರಾನ್ನ |
| ೪ ಗುರುವಾರ | ಅಮುಲ್ಯೆಸ್ ಆಹಾರ | ಅಮುಲ್ಯೆಸ್ ಆಹಾರ | ಅಮುಲ್ಯೆಸ್ ಆಹಾರ |
| | ೭೫ ಗ್ರಾಂ | ೧೦೦ ಗ್ರಾಂ | ೧೦೦ಗ್ರಾಂ |
| ೫. ಶುಕ್ರವಾರ | ಗೋಧಿ ಉಪ್ಪಿಟ್ಟು | ಗೋಧಿ ಉಪ್ಪಿಟ್ಟು | ಗೋಧಿ ಉಪ್ಪಿಟ್ಟು |
| | ಗೋಧಿ ೧೦೦ ಗ್ರಾಂ | ಗೋಧಿ ೧೦೦ ಗ್ರಾಂ | ಗೋಧಿ ೧೦೦ ಗ್ರಾಂ |
| | ಉಳಿದಂತೆ ಚಿತ್ರಾನ್ನದ | ಉಳಿದಂತೆ ಚಿತ್ರಾನ್ನದ | ಉಳಿದಂತೆ ಚಿತ್ರಾನ್ನದ |
| | ದಿವಸ ಕೊಡುವ | ದಿವಸ ಕೊಡುವ | ದಿವಸ ಕೊಡುವ |
| | ಆಹಾರ ಸಾಮಗ್ರಿ | ಆಹಾರ ಸಾಮಗ್ರಿ | ಆಹಾರ ಸಾಮಗ್ರಿ |
| | | ಕೊಡುವುದು ಕೊಡುವುದು | |
| ೬. ಶನಿವಾರ | ಅಮುಲ್ಯೆಸ್ ಆಹಾರ | ಅಮುಲ್ಯೆಸ್ ಆಹಾರ | ಅಮುಲ್ಯೆಸ್ ಆಹಾರ |
| | ೭೫ ಗ್ರಾಂ | ೧೦೦ಗ್ರಾಂ | ೧೦೦ಗ್ರಾಂ |

## ರೋಗ ನಿರೋಧಕ ಚುಚ್ಚುಮದ್ದಿನ ಕಾರ್ಯಕ್ರಮ

### ಲಸಿಕೆ ನೀಡಿಕೆ

ಚುಚ್ಚುಮದ್ದು ನೀಡಿಕೆ ಕಾರ್ಯಕ್ರಮ ಮಕ್ಕಳನ್ನು ಆರು ಮಾರಕ ರೋಗಗಳಿಂದ ಹಾಗೂ ಇವುಗಳಿಂದಾಗುವ ಅಂಗವಿಕಲತೆ ಮತ್ತು ಸಾವಿನಿಂದ ರಕ್ಷಿಸುತ್ತದೆ. ಆರು ಮಾರಕ ರೋಗಗಳ ಚಿಹ್ನೆ ಮತ್ತು ದುಷ್ಪರಿಣಾಮಗಳು ಈ ಕೆಳಕಂಡತಿವೆ.

| ರೋಗದ ಹೆಸರು | ಚಿಹ್ನೆ | ದುಷ್ಪರಿಣಾಮಗಳು |
|---|---|---|
| ಕ್ಷಯ | ಅಪೌಷ್ಟಿಕತೆ<br>ಕುತ್ತಿಗೆಯಲ್ಲಿ<br>ಗ್ರಂಥಿಗಳು<br>ಶ್ವಾಶಕೋಶದಲ್ಲಿ ತೊಂದರೆ | ಶರೀರದ ವಿವಿಧ<br>ಭಾಗಗಳಿಗೆ<br>ತೊಂದರೆ |
| ಗಂಟಲುಮಾರಿ | ಗಂಟಲು ಬಿಗಿತ<br>ಉಸಿರಾಟಕ್ಕೆ<br>ತೊಂದರೆ | ಹೃದಯಕ್ಕೆ ಹಾನಿ<br>ಪಾರ್ಶ್ವವಾಯು<br>ಸಾವು ಉಂಟಾಗಬಹುದು |
| ನಾಯಿಕೆಮ್ಮು | ಸತತ ಕೆಮ್ಮು<br>ಕೆಮ್ಮು ಮತ್ತು ವಾಂತಿ<br>ಮಾಡಿಕೊಳ್ಳುವುದು<br>ಅಪೌಷ್ಟಿಕತೆ | ನ್ಯುಮೋನಿಯಾ<br>ಕುರುಡುತನ<br>ಮೆದುಳಿಗೆ ಹಾನಿ<br>ಸಾವು |
| ಧನುರ್ವಾಯು | ಮೊದಲು ತಾಯಿಯ ಎದೆ ಹಾಲು<br>ಚೀಪುತ್ತಿದ್ದು ನಂತರ ಸಾಧ್ಯವಾ<br>ಗದಿರುವುದು, ಬಾಯಿ, ಬಿಗಿತ, ದೇಹ<br>ಬಿಗಿಯಾಗಿ ಬಿಲ್ಲಿನಂತೆ ಬಾಗುವುದು,<br>ದೇಹ ಸೆಳೆತ | ಸಾವು |
| ಪೋಲಿಯೋ | ಜ್ವರ<br>ಕಾಲುಗಳಲ್ಲಿ ನಿಶ್ಯಕ್ತಿ | ಶಾಶ್ವತವಾಗಿ<br>ಪಾರ್ಶ್ವವಾಯು<br>ಒಂದು ಅಥವಾ ಎರಡು<br>ಕಾಲುಗಳಿಗೆ<br>ಒಂದು ಅಥವಾ ಎರಡು<br>ಕೈಗಳಿಗೆ<br>ಎರಡಕ್ಕೂ ವಿಕಲತೆ<br>ಯಾಗಬಹುದು<br>ಸಾವೂ ಉಂಟಾಗಬಹುದು |

| | | |
|---|---|---|
| ದಡಾರ | ಜ್ವರ | ಅತಿಸಾರ ಭೇದಿ |
| | ಗಂದೆಗಳು | ನ್ಯುಮೋನಿಯಾ |
| | ಕೆಮ್ಮು | ತೀವ್ರತರ ಅಪೌಷ್ಟಿಕತೆ |
| | | ಮೆದುಳಿಗೆ ಹಾನಿ |
| | | ಕುರುಡುತನ ಸಾವು |

**ಸಮುದಾಯದ ಭಾಗವಹಿಸುವಿಕೆ**

ಸಮುದಾಯದ ಭಾಗವಹಿಸುವಿಕೆ ಸಮಗ್ರ ಶಿಶು ಅಭಿವೃದ್ಧಿ ಸೇವಾ ಯೋಜನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಸಾಮಾನ್ಯವಾಗಿ ಅಂಗನವಾಡಿ ಕಾರ್ಯಕರ್ತೆಯರು ಸಮಗ್ರ ಶಿಶು ಅಭಿವೃದ್ಧಿ ಸೇವಾ ಯೋಜನೆಯ ಸೇವೆಗಳನ್ನು ಫಲಾನುಭವಿಗಳಿಗೆ ತಲುಪಿಸುವಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಉದಾಹರಣೆಗೆ ಕಟ್ಟಡ, ಉರುವಲು, ಶಾಲಾಪೂರ್ವ ಶಿಕ್ಷಣ, ಮಕ್ಕಳ ಬೆಳವಣಿಗೆ ಪರಿಶೀಲನೆ, ಚುಚ್ಚುಮದ್ದು ಹಾಗೂ ಮಾಹಿತಿ ಸೇವೆಗಾಗಿ ತಾಯಂದಿರು ಮಕ್ಕಳನ್ನು ಕಳುಹಿಸದೇ ಇರುವುದು ಮುಂತಾದವು. ಈ ಸಮಸ್ಯೆಗಳನ್ನು ಪರಿಹರಿಸಲು ಅಂಗನವಾಡಿ ಕಾರ್ಯಕರ್ತೆಯರು ಸಮುದಾಯದ ಸಹಕಾರವನ್ನು ಅರ್ಥಪೂರ್ಣವಾಗಿ ಪಡೆದಾಗ ಮಾತ್ರ ಸಾಧ್ಯವಾಗುತ್ತದೆ.

ಈ ಭಾಗದಲ್ಲಿ ಅಂಗನವಾಡಿ ಕಾರ್ಯಕರ್ತೆಯ ಸಮುದಾಯದ ಸಹಕಾರ ಯಾವ ರೀತಿ ಪಡೆದುಕೊಂಡು ತನ್ನ ಸಮಸ್ಯೆಗಳನ್ನು ನಿವಾರಿಸಿಕೊಳ್ಳಬಹುದು ಎಂಬುದರ ಬಗ್ಗೆ ಟಿಪ್ಪಣಿ, ಸಂಭಾಷಣೆ, ಯಶಸ್ವಿ ಕಥೆ, ರೂಪಕ, ಚರ್ಚೆ ಮುಂತಾದವುಗಳ ಮುಂಖಾಂತರ ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಸಮುದಾಯ ಭಾಗವಹಿಸುವಿಕೆಯನ್ನು ಹೇಗೆ ಪಡೆಯಬೇಕೆಂಬುದನ್ನು ಯಾವುದೇ ಒಂದು ನಿರ್ದಿಷ್ಟ ಸೂತ್ರದಲ್ಲಿ ಹೇಳಲು ಸಾಧ್ಯವಿಲ್ಲ. ಇದು ವ್ಯಕ್ತಿಯ ಕಾರ್ಯ ಕುಶಲತೆಯನ್ನು ಅವಲಂಬಿಸಿರುತ್ತದೆ. ಆದ್ದರಿಂದ, ಅಂಗನವಾಡಿ ಕಾರ್ಯಕರ್ತೆಯರ ವಿವಿಧ ಅಂಶಗಳನ್ನು ಆಧಾರವಾಗಿಟ್ಟುಕೊಂಡು ತಮ್ಮ ಸ್ಥಳೀಯ ಸನ್ನಿವೇಶಗಳಾಗಿ ಪಾಲ್ಗೊಳ್ಳುವಂತೆ ಪ್ರಯತ್ನಿಸಬೇಕು.

**ವಿವಿಧ ಕ್ಷೇತ್ರಗಳಲ್ಲಿ ಸಮುದಾಯದ ಭಾಗವಹಿಸುವಿಕೆ**

ಕೇಂದ್ರಕ್ಕೆ ಕಟ್ಟಡದ ವ್ಯವಸ್ಥೆ



ಹೊಸ ಕಟ್ಟಡ ಕಟ್ಟಿಸುವುದು

ಬದಲಿ ಕಟ್ಟಡ ಕೊಡುವುದು

ಕಟ್ಟಡದ ರಿಪೇರಿ ಮಾಡುವುದು

ಕೇಂದ್ರಕ್ಕೆ ಉರುವಲು ವ್ಯವಸ್ಥೆ

ರೋಗನಿರೋಧಕ ಚುಚ್ಚುಮದ್ದು ಮತ್ತು ಆರೋಗ್ಯ ಪರೀಕ್ಷಾ ಕಾರ್ಯಕ್ಕೆ ಸಹಕರಿಸಿ ಸಹಾಯ ಮಾಡುವುದು

ಕೇಂದ್ರಕ್ಕೆ ಆಟಿಕೆಗಳನ್ನು ಸಂಗ್ರಹಿಸುವಲ್ಲಿ ಸಹಕಾರ ನೀಡುವುದು

ಬಾಲಮೇಳ, ಅಂಗನವಾಡಿ ದಿನಾಚರಣೆ, ತಾಯಂದಿರ ಸಭೆ, ಪ್ರಾತ್ಯಕ್ಷಿಕೆ ಶಿಬಿರ, ರಾಷ್ಟ್ರೀಯ ಹಬ್ಬಗಳ ಆಚರಣೆ ಇತ್ಯಾದಿಗಳಲ್ಲಿ ಸಹಾಯ ಮತ್ತು ಸಕ್ರಿಯ ಭಾಗವಹಿಸುವಿಕೆ

ಶಾಲಾಪೂರ್ವ ಶಿಕ್ಷಣ ನಡೆಸುವಲ್ಲಿ ಸಮುದಾಯ ಭಾಗವಹಿಸುವುದು

ಪೂರಕ ಪೌಷ್ಟಿಕ ಆಹಾರ ತಯಾರಿಕೆ ಮತ್ತು ವಿತರಣೆಯಲ್ಲಿ ಸಹಕರಿಸುವುದು

ಕೇಂದ್ರದ ಪ್ರಗತಿಯ ಬಗ್ಗೆ ಚರ್ಚಿಸುವುದು. ಕೇಂದ್ರದಲ್ಲಿ ತಿಳಿಸಿದ ಕಲಿಸಿದ ವಿಚಾರಗಳನ್ನು ಮನೆಯಲ್ಲಿ ಅನುಷ್ಠಾನಕ್ಕೆ ತರುವುದು ಮತ್ತು ಕಾರ್ಯಕ್ರಮದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವುದು.

**ಸಮುದಾಯದ ಭಾಗವಹಿಸುವಿಕೆ ಯಶಸ್ವಿಯಾಗುವುದು ಹೇಗೆ**

೧. ಸಮುದಾಯದೊಂದಿಗೆ ನಿರಂತರ ಸಂಪರ್ಕವನ್ನು ಇಟ್ಟುಕೊಳ್ಳುವುದರಿಂದ

೨. ಯೋಜನೆಯ ಬಗ್ಗೆ ಸಮುದಾಯಕ್ಕೆ ಸಕಾಲದಲ್ಲಿ ಸರಿಯಾದ ಮಾಹಿತಿ ನೀಡುವುದರಿಂದ

೩. ಯೋಜನೆಯಲ್ಲಿ ಭಾಗವಹಿಸಲು ಸಮುದಾಯಕ್ಕೆ ಸೂಕ್ತ ಅವಕಾಶಗಳನ್ನು ಕಲ್ಪಿಸಿಕೊಡುವುದರಿಂದ

೪. ಕಾರ್ಯಕರ್ತೆಯರು ಇತರರಿಗೆ ಮಾದರಿಯಾಗಿರುವುದರಿಂದ

೫. ಸಮುದಾಯದ ಅಗತ್ಯಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸುವುದರಿಂದ

೬. ಯೋಜನೆಯ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಹೊಂದಿರುವುದರಿಂದ

೭. ವ್ಯಕ್ತಿ ಮತ್ತು ಸಂಘಸಂಸ್ಥೆಗಳು ಯೋಜನೆಯ ಅನುಷ್ಠಾನದಲ್ಲಿ ತಮ್ಮ ನಿರ್ದಿಷ್ಟವಾದ ಪಾತ್ರದ ಬಗ್ಗೆ ತಿಳಿವಳಿಕೆ ಹೊಂದಿರುವುದರಿಂದ

೮. ಕಾರ್ಯಕ್ರಮದ ಅನುಷ್ಠಾನದಲ್ಲಿ ಒಮ್ಮತದ ಅಭಿಪ್ರಾಯವಿರುವುದರಿಂದ

**ಅಭಿನಯ ಗೀತೆ**

**೧. ನಮ್ಮ ಬಾವುಟ**

ಏರುತಿಹುದು ಹಾರುತಿಹುದು ನೋಡು ನಮ್ಮ ಬಾವುಟ
ತೋರುತಿಹುದು ಹೊಡೆದು ಹೊಡೆದು ಬಾನಿನಗಲ ಪಟಪಟಾ
ಕೇಸರಿ ಬಿಳಿ ಹಸಿರು ಮೂರು ಬಣ್ಣ
ನಡುವೆ ಚಕ್ರವು
ಸತ್ಯ ಶಾಂತಿ ತ್ಯಾಗ ಮೂರ್ತಿ ಗಾಂಧಿ ಹಿಡಿದ ಚರಕವು
ಇಂಥ ಧ್ವಜವು ನಮ್ಮ ಧ್ವಜವು ನೋಡು ಹಾಡುತಿರುವುದು
ಧ್ವಜದ ಭಕ್ತಿ ನಮ್ಮ ಶಕ್ತಿ ನಾಡ ನುಡಿಯ ಮೆರೆವುದು.

ಪ್ರಪಂಚದಲ್ಲಿ ಸಂಸ್ಕೃತಿಗೆ ಹೆಸರಾಗಿರುವ ದೇಶವೆಂದರೆ ಭಾರತ. ಪ್ರಪಂಚದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ದೇಶಗಳಿವೆ. ಅವು ತಮ್ಮ ಗುರುತುಗಳಿಗಾಗಿ ಒಂದೊಂದು ಸಂಕೇತಗಳನ್ನು ಇಟ್ಟುಕೊಂಡಿದ್ದಾರೆ. ಅದೇ ರೀತಿಯಾಗಿ ಭಾರತವು ಸಹ ಕೇಸರಿ, ಬಿಳಿ, ಹಸಿರು ಮೂರು ಬಣ್ಣಗಳಿಂದ ಕೂಡಿದ ಬಾವುಟವನ್ನು ಭಾರತದ ಬಾವುಟವಾಗಿ ಸ್ವೀಕರಿಸಿದ್ದಾರೆ. ಇದನ್ನು ರಾಷ್ಟ್ರೀಯ ಹಬ್ಬಗಳ ಸಂದರ್ಭದಲ್ಲಿ ಬಾನಿನಗಲ ಹಾರಿಸುತ್ತಾರೆ. ಅದಕ್ಕೆ ಗುರುವಂದನೆಯನ್ನು ನೀಡುವುದರ ಮೂಲಕ ರಾಷ್ಟ್ರ ರಕ್ಷಣೆಗೆ ಒಂದಾಗುತ್ತಾರೆ. ಈ ಮೂರು ಬಣ್ಣಗಳು, ಸತ್ಯ, ಶಾಂತಿ, ತ್ಯಾಗ. ಅಂದರೆ, ನಮ್ಮ ದೇಶದ ಜನತೆ ಸತ್ಯವಂತರು, ಶಾಂತಿಯುತರು, ತ್ಯಾಗಮಯಿಗಳಾಗಿರುತ್ತಾರೆ ಎಂಬುದನ್ನು ಸೂಚಿಸುತ್ತವೆ. ಇದಕ್ಕೆ ಕವಿ ಗಾಂಧೀಜಿ ಅವರನ್ನು ಇಲ್ಲಿ ಉದಾಹರಿಸಿದ್ದಾರೆ ಸತ್ಯ, ಶಾಂತಿ, ತ್ಯಾಗದಿಂದ ಭಾರತಕ್ಕೆ ಸ್ವಾತಂತ್ರ್ಯ ತಂದು ಕೊಟ್ಟರು, ಇಂತಹ ಸಜ್ಜನಿಕೆಯ ತ್ಯಾಗ ಮೂರ್ತಿಗಳಿಂದ ಭಾರತವು ಸ್ವಾತಂತ್ರ್ಯಗೊಂಡಿತು. ರಾಷ್ಟ್ರೀಯ ಹಬ್ಬಗಳ ಸಂದರ್ಭದಲ್ಲಿ ಕೇಸರಿ, ಬಿಳಿ, ಹಸಿರು ಬಣ್ಣಗಳಿಂದ ಕೂಡಿ ನಡುವೆ ಅಶೋಕ ಚಕ್ರಹೊಂದಿದ ಬಾವುಟಗಳನ್ನು ಹಾರಿಸುವುದರ ಮೂಲಕ ಹಬ್ಬಗಳನ್ನು ಆಚರಿಸುತ್ತಾರೆ. ಇಂತಹ ಸಮಯಗಳಲ್ಲಿ ದೇಶಭಕ್ತಿ ಗೀತೆಗಳನ್ನು ಹಾಡುತ್ತಾರೆ.

**೨. ಸಾಗಿ ಮುಂದೆ ಭಾರತೀಯರಿಂದೆ**

ಸಾಗಿ ಮುಂದೆ ಭಾರತೀಯರಿಂದೆ
ವಂದೇ ಮಾತರಂ ವಂದೇ ಮಾತರಂ ಒಂದೇ ಮಾತರಂ ಎನ್ನಿರಿ
ಹಾಸ್ಯಪುಸ್ಯ ಹರಿದಿರೇ ಹಾರಿತೋ ತೂರಿಕೇ ಹೆ ಹೆ ಹೆ
ಶಾಂತಿ ಸತ್ಯ ಪಾಠ ನಮ್ಮ ನಾಡ ಬಾವುಟ
ನಮ್ಮ ನುಡಿಯ ಭಾನುಮರ
ಹಿಮಾಚಲಕೆ ಏರಿದೆ ಜಗದ ದಾರಿ ತೋರಿದೆ
ಏರಿಸಿ ಹಾರಿಸಿ

ಭಾರತೀಯ ಜನತೆಯು ಐಕ್ಯತೆಯಿಂದ, ಸಹಬಾಳ್ವೆಯಿಂದ ಕೂಡಿದವರು, ನಾವೆಲ್ಲರು ಒಂದೇ, ಒಂದೇ ಕುಟುಂಬಕ್ಕೆ ಸೇರಿದವರು, ನಮ್ಮಲ್ಲಿ ಕೆಟ್ಟ ನಡತೆ ಇರಬಾರದು, ಸಂಘರ್ಷಗಳಿರಬಾರದು ಸಹನೆ, ಸಹಕಾರದಿಂದ ಬಾಳಬೇಕು, ಶಾಂತಿ, ಸತ್ಯ, ತ್ಯಾಗದಿಂದ ಕೂಡಿದ ಬಾವುಟವನ್ನು ಹಾರಿಸುವುದರ ಮೂಲಕ ನಾವೆಲ್ಲರೂ ಒಂದಾಗಬೇಕು. ನಮ್ಮ ಉಸಿರ ಬಾವುಟ, ನಮ್ಮ ಹಸಿರು ಬಾವುಟ. ನಮ್ಮದು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹರಡಿದಂತಹ ನಾಡು. ಈ ನಾಡಿನಲ್ಲಿ ದ್ವೇಷ ಸಂಘರ್ಷಗಳಿರದೇ, ಸಹಬಾಳ್ವೆ ಸಹಕಾರದಿಂದ ಇರಬೇಕು, ನಮ್ಮ ಬಾವುಟ ಹಿಮಾಚಲ ಪ್ರದೇಶದಲ್ಲಿ ಗಡಿ ಕಾಯುವವರೆಗೂ ಗಡಿ ರೇಖೆಯಲ್ಲಿಯೂ ಹಾರಾಡಬೇಕು ಎಂಬ ಆಶಯದೊಂದಿಗೆ ದೇಶಭಕ್ತಿ ಗೀತೆಯನ್ನು ಹಾಡುತ್ತಾರೆ.

೩. ಭಾರತೀಯರೆಲ್ಲರು ಒಂದೇ

ಒಂದು ಒಂದು ಒಂದು
ಭಾರತೀಯರೆಲ್ಲರು ಒಂದು
ಎರಡು ಎರಡು ಎರಡು
ಗಂಡು ಹೆಣ್ಣು ಎರಡು
ಮೂರು ಮೂರು ಮೂರು
ಧ್ವಜದ ಬಣ್ಣವು ಮೂರು
ನಾಲ್ಕು ನಾಲ್ಕು ನಾಲ್ಕು
ಧ್ವಜಕ್ಕೆ ನಮಿಸಬೇಕು
ಐದು ಐದು ಐದು
ವಿಷಮವ ತಿಳಿಯವೆ ಆಯ್ದು

ರಾಷ್ಟ್ರೀಯ ಭಾವೈಕ್ಯತೆ ಎಂಬುದು ಕಲ್ಲು ಮಣ್ಣು, ಇಟ್ಟಿಗೆಗಳಿಂದ ಕಟ್ಟಲಾಗುವುದಿಲ್ಲ ಅದು ಮನುಷ್ಯನ ಅಂತರಾಳದಿಂದ ಹುಟ್ಟಿ ಬರಬೇಕು. ಈ ಮೇಲಿನ ಸಾಲುಗಳು ನಾವೆಲ್ಲರೂ ಒಂದು ಭಾವನೆಯನ್ನು ಯಾವ ರೀತಿಯಿಂದ ಹುಟ್ಟಬೇಕು ಎಂಬುದನ್ನು, ತಿಳಿಸಿಕೊಡುವುದರ ಜೊತೆಗೆ ರಾಷ್ಟ್ರದ ಒಗ್ಗಟ್ಟಿನ ಸಂಕೇತವನ್ನು ತಿಳಿಸಿಕೊಡುತ್ತದೆ. ಭಾರತೀಯರೆಲ್ಲರು ಒಂದೇ, ನಮ್ಮ ಹತ್ತಿರ ಭೇದ ಭಾವವಿಲ್ಲ, ಎರಡು ಗಂಡು ಹೆಣ್ಣು ಮಾತ್ರ, ಬದಲಾಗಿ ಜಾತಿಗಳಿಲ್ಲ ಎಂಬುದನ್ನು ತಿಳಿಸುತ್ತದೆ. ಮೂರು ತ್ರಿವರ್ಣ ಧ್ವಜದಲ್ಲಿರುವ ಮೂರು ಬಣ್ಣಗಳನ್ನು ಪರಿಚಯಿಸುತ್ತದೆ. ಇದರೊಂದಿಗೆ ಭೇದ ಭಾವವ ಮಾಡದೇ ಜಾತಿ ಮತ ಧರ್ಮವೆನ್ನದೇ ನಾವೆಲ್ಲರೂ ಒಂದೇ ಎಂಬ ಭಾವನೆಯನ್ನು ಹುಟ್ಟಿಸುತ್ತದೆ. ಈ ದೇಶ ಭಕ್ತಿಗೀತೆಯಿಂದ ಮಕ್ಕಳು ಭೇದ ಭಾವವ ಮರೆತು ಜಾತಿ ಮತ ಧರ್ಮವೆನ್ನದೇ ಸಹಕಾರ ಸಹಬಾಳ್ವೆಯಿಂದ ಕೂಡಿ ಬಾಳಲು ಮುಂದಾಗುತ್ತಾರೆ.

ಭಾವಗೀತೆ ಹಾಡುವ ಮುಖಾಂತರ ಮಕ್ಕಳಲ್ಲಿ ದೇಶಭಕ್ತಿ, ದೇಶ ಅಭಿಮಾನ, ನಾವು, ನಮ್ಮವರು ಎಂಬುಯು ತಿಳಿಸುವುದು

ಅಂಗನವಾಡಿ ಕಾರ್ಯಕರ್ತೆ ಮಕ್ಕಳಲ್ಲಿ ದೇಶಾಭಿಮಾನ ಮತ್ತು ರಾಷ್ಟ್ರಭಕ್ತಿ ಮೂಡಿಸುವಳು ನಾವೆಲ್ಲರೂ ಒಂದೇ ಎಂಬ ಭಾವನೆ ಮಕ್ಕಳ ಮನಸಿನಲ್ಲಿ ಮೂಡಿಸುವಳು. ಇಲ್ಲಿ ಅಭಿನಯ ಗೀತೆಗಳು ಪ್ರಮುಖ ಪಾತ್ರ ವಹಿಸುತ್ತವೆ.

**ಆಟಗಳು**

ಮಕ್ಕಳು ಆಟ ಆಡಲು ಇಷ್ಟಪಡುತ್ತಾರೆ ಮತ್ತು ಆಟದಿಂದ ಸಂತಸ ಪಡುತ್ತಾರೆ. ಆಟಗಳಲ್ಲಿ ಸಂವಹನ ಕ್ರಿಯೆ ಹೆಚ್ಚು ಪರಿಣಾಮಕಾರಿಯಾಗಿ ಆಟ ಆಡುವವರು ಮತ್ತು ಕಾರ್ಯಕರ್ತೆಯರ ನಡುವೆ

ಏರ್ಪಡುತ್ತವೆ. ಭಾಷೆ ಕಲಿಕೆಯಲ್ಲಿ ಆಟಗಳು ಸಹಕಾರಿಯಾಗಿವೆ. ಆಟಗಳು ಪ್ರೇರಣೆ ಉಂಟುಮಾಡಿ ಪರಿಕಲ್ಪನೆ ಕಲಿಕೆಯಲ್ಲಿ ಆಸಕ್ತಿ ಉಂಟು ಮಾಡುತ್ತದೆ.

**ಚಟುವಟಿಕೆಯ ಉದ್ದೇಶಗಳು**

ಅಂಗನವಾಡಿಗೆ ಕೇಂದ್ರಗಳಲ್ಲಿ ಮಕ್ಕಳ ಅವಧಾನವನ್ನು ಸೆಳೆದು, ಆಸಕ್ತಿದಾಯಕವಾಗಿರುವಂತೆ ಮಾಡಲು, ದೈಹಿಕ ಬೆಳವಣಿಗೆಯಲ್ಲಿ ದೊಡ್ಡ ಸ್ನಾಯುಗಳು ಚಿಕ್ಕ ಸ್ನಾಯುಗಳ ಬೆಳವಣಿಗೆಗೆ ಪೂರಕ ವಾತಾವರಣ ನಿರ್ಮಾಣ ಮಾಡಲು.

ಮನರಂಜನೆಗೆ ಪೂರಕ ವಾತಾವರಣ ನಿರ್ಮಾಣ ಮಾಡಲು.

ಆರೋಗ್ಯಕರ ಸ್ಪರ್ಧಾ ಮನೋಭಾವನೆ ಬೆಳೆಸಲು.

ನಿರ್ಧಾರ ತಗೆದುಕೊಳ್ಳುವುದು.

ಸಮಯಪ್ರಜ್ಞೆ, ಸಮಯ ಪಾಲನೆ.

ಪರಸ್ಪರ ಹೊಂದಾಣಿಕೆ.

ಆತ್ಮ ಸ್ಥೈರ್ಯ, ಸ್ವರಕ್ಷಣೆ ಪ್ರವೃತ್ತಿ ಬೆಳೆಸಲು ಸಹಕಾರಿ.

ನಾಯಕತ್ವ ಬೆಳವಣಿಗೆ.

ಸೋಲು ಗೆಲುವನ್ನು ಸಮಾನವಾಗಿ ಸ್ವೀಕರಿಸುವ ಮನೋಭಾವ ಬೆಳೆಸಲು.

ಸಹಬಾಳ್ವೆ.

ಸಹಕಾರ.

ಸ್ವಯಂ ಶಿಸ್ತು, ಸಂಪತನ್ನು ಹೆಚ್ಚಿಸಲು.

ಉತ್ತಮ ಸಕಾರಾತ್ಮಕ ಭಾವನೆಗಳನ್ನು ಬೆಳೆಸಲು, ಭಾವನೆಗಳನ್ನು ನಿಯಂತ್ರಿಸುವ ಸಾಮರ್ಥ್ಯ ಬೆಳೆಸಲು.

ಉತ್ತಮವಾದುವನ್ನು ಗುರ್ತಿಸಿ ಸ್ವೀಕರಿಸುವ ಮನೋಭಾವ ರೂಪಿಸಲು.

**ಚಟುವಟಿಕೆಯ ಲಕ್ಷಣಗಳು**

ಆಟಗಳು ಆರೋಗ್ಯದಾಯಕ ಸ್ಪರ್ಧಾ ಮನೋಭಾವನೆ ಬೆಳೆಸುವಂತೆ ಇರಬೇಕು.

ಆಟಗಳನ್ನು ಆಯ್ಕೆ ಮಾಡುವಾಗ ಆಟದಲ್ಲಿ ಬಳಕೆ ಮಾಡುವ ಪದಗಳ ಆಯಾ ಪರಿಕಲ್ಪನೆಗೆ ಸಂಬಂಧಿಸಿದಂತೆ ಇರಬೇಕು.

ಆಟಗಳನ್ನು ಆಯ್ಕೆ ಮಾಡುವಾಗ ಸ್ಥಳಾವಕಾಶಕ್ಕೆ ತಕ್ಕಂತೆ ಅದರ ಪ್ರಕಾರಗಳನ್ನು ತಿಳಿದುಕೊಂಡು ಆಯ್ಕೆ ಮಾಡುವುದು.

ಮಕ್ಕಳ ವಯೋಮಾನಕ್ಕೆ ತಕ್ಕಂತೆ ಆಟಗಳ ಆಯ್ಕೆ ಇರಬೇಕು.

ಅಪಾಯಕಾರಿ ಆಟಗಳನ್ನು ಆಯ್ಕೆ ಮಾಡಿಕೊಳ್ಳಬಾರದು.

ಆಟದ ಪ್ರಕಾರಗಳು - ಹೊರಾಂಗಣ ಆಟಗಳು, ಒಳಾಂಗಣ ಆಟಗಳು ಈ ಚಟುವಟಿಕೆಯು ಮಕ್ಕಳ ಬೆಳವಣಿಗೆ ಪೂರಕ. ಕೇಂದ್ರಗಳಲ್ಲಿ ಮಕ್ಕಳು ಸಂತಸದಾಯಕವಾಗಿರುವ ಪರಿಸರ ನಿರ್ಮಾಣ ಮಾಡಬಹುದು.

ದೇಹದಲ್ಲಿ ದೊಡ್ಡ ಸ್ನಾಯುಗಳ ಮತ್ತು ಸಣ್ಣ ಸ್ನಾಯುಗಳ ಬೆಳವಣಿಗೆಗೆ ಅಗತ್ಯ ಪರಿಸರ ನಿರ್ಮಾಣ ಮಾಡಲು ಸಹಾಯಕವಾಗಿದೆ.

ಮಗು ಸವಾಲನ್ನು ಧೈರ್ಯವಾಗಿ ಸ್ವೀಕರಿಸಲು ಪ್ರಾರಂಭಿಸುತ್ತದೆ.

ಆರೋಗ್ಯಕರ ಸ್ಪರ್ಧಾ ಮನೋಭಾವನೆ, ಸೋಲು ಗೆಲುವನ್ನು ಸಮಾನವಾಗಿ ಸ್ವೀಕರಿಸಲು ಕಲಿಸುವ ಆಟಗಳು ಸಾಮಾಜಿಕ ಸಂಬಂಧವನ್ನು ಹೆಚ್ಚಿಸುತ್ತದೆ.

ದೇಹದ ಬೇರೆ ಬೇರೆ ಅಂಶಗಳ ನಡುವಿನ ಕ್ರಿಯೆಗಳಿಗೆ ಸಮನ್ವಯತೆ ಉಂಟುಮಾಡಲು ಸಹಕಾರಿ.

ದೇಹ ಮತ್ತು ಮನಸ್ಸಿನ ಸಮನ್ವಯತೆಯನ್ನು ಅಭ್ಯಾಸ ಮಾಡುವುದು.

ಸಮಯಪ್ರಜ್ಞೆ, ಸಮಯಪಾಲನೆ, ಸ್ವಯಂಶಿಸ್ತು, ಪರಸ್ಪರ ಸಹಕಾರ ಮನೋಭಾವ, ಯುಕ್ತಿ, ತರ್ಕಬದ್ಧವಾಗಿ ಯೋಜಿಸುವ ಸಾಮರ್ಥ್ಯ ಬೆಳೆಸುತ್ತದೆ.

ಮಕ್ಕಳಲ್ಲಿ ಐಕ್ಯತಾ ಮನೋಭಾವ ಮೂಡಿಸುವುದು.

ಭಾಷಾ ಬೆಳವಣಿಗೆಯಲ್ಲಿ ಮಕ್ಕಳು ಆಲಿಸುವ ಪ್ರಕ್ರಿಯೆಗೆ ಹೆಚ್ಚು ತೆರೆದುಕೊಳ್ಳಬೇಕು. ಆಟ ಆಡುವಾಗ ಬಳಸುವ ಪದಗಳು ಈ ಅವಶ್ಯಕತೆಯನ್ನು ಪೂರೈಸುತ್ತದೆ. ಮಕ್ಕಳಲ್ಲಿ ಆಲಿಸುವಿಕೆಯ ಕೌಶಲ್ಯ ಹೆಚ್ಚುತ್ತದೆ.

**ಈ ಚಟುವಟಿಕೆಯ ಸಂದರ್ಭದಲ್ಲಿ ಗಮನಿಸಬೇಕಾದ ಅಂಶಗಳು**

**ಆಟದ ಆಯ್ಕೆ-** ಆಯ್ಕೆ ಮಾಡಿದ ಆಟಗಳು ಪರಿಕಲ್ಪನೆಗೆ ಪೂರಕವಾಗಿರಬೇಕು. ಮಕ್ಕಳು ವಯೋಮಾನಕ್ಕೆ ತಕ್ಕಂತೆ ಇರಬೇಕು.

**ಸ್ಥಳಾವಕಾಶ ಆಟದ-** ಪ್ರಕಾರಗಳಿಗೆ ತಕ್ಕಂತೆ ಸ್ಥಳಾವಕಾಶ ಮಾಡಿಕೊಳ್ಳುವುದು. ಹವಾಮಾನಕ್ಕೆ ತಕ್ಕಂತೆ ಆಟದ ಆಯ್ಕೆ ಮತ್ತು ಆಟದ ಸ್ಥಳದ ಆಯ್ಕೆ ಮಾಡುವುದು.

**ಸೂಚನೆಗಳು ನಿರ್ದೇಶನಗಳ-** ಆಟದ ಸೂಚನೆಗಳ ಆಜ್ಞೆಗಳಂತೆ ಆದೇಶದಂತೆ ಇರಬಾರದು. ಮಕ್ಕಳು ಪ್ರೀತಿಯಿಂದ ಆ ಸೂಚನೆಗಲನ್ನು ಒಪ್ಪುವಂತಿರಬೇಕು.

**ಆಟದ ಸಾಮಗ್ರಿಗಳು-** ಆಟದ ಸಾಮಗ್ರಿಗಳು ಎಲ್ಲ ಮಕ್ಕಳಿಗೆ ದೊರೆಯುವ ಸಂಖ್ಯೆಯಲ್ಲಿರಬೇಕು.

ಈ ಚಟುವಟಿಕೆಗೆ ಕೇಂದ್ರಗಳಲ್ಲಿ ಮಕ್ಕಳನ್ನು ತೊಡಗಿಸುವಾಗ ಅನುಸರಿಸಬೇಕಾದ ಹಂತಗಳು

ಚಟುವಟಿಕೆಯ ಪೂರ್ವಹಂತ ಪರಿಕಲ್ಪನೆಗೆ ಸಂಬಂಧಿಸಿದ ಆಟ ಆಯ್ಕೆ ಮಾಡಿಕೊಳ್ಳುವುದು.

ಆಟ ಆಡಿಸಲು ಸಂಬಂಧಿಸಿದಂತೆ ನಿಯಮ ನಿರೂಪಣೆ ಮಾಡಿಕೊಳ್ಳುವುದು. ನೀಡಬೇಕಾದ ಸೂಚನೆಗಳನ್ನು ಸಿದ್ಧಮಾಡಿಕೊಳ್ಳುವುದು.

ಆಟಕ್ಕೆ ಅಗತ್ಯ ಪರಿಕರಗಳನ್ನು ಸಿದ್ಧಪಡಿಸಿಟ್ಟುಕೊಳ್ಳಬಹುದು.

**ಚಟುವಟಿಕೆ ಮಾಡುವಾಗ**

ಸಂಬಂಧಿಸಿದ ಪರಿಕಲ್ಪನೆಯ ಹಾಡು, ಡಫಿಯನ್ನು ಎರಡು ಬಾರಿ ನೆನಪಿಸಿ ಆಟದ ಚಟುವಟಿಕೆ ಸಿದ್ಧಪಡಿಸುವುದು.

ಆಟಕ್ಕೆ ಸಂಬಂಧಿಸಿದ ಸೂಚನೆಗಳನ್ನು ಮಕ್ಕಳಿಗೆ ಅರ್ಥವಾಗುವಂತೆ ತಿಳಿಸುವುದು.

ಆಟ ಆಡುವಾಗ ಮಕ್ಕಳಿಗೆ ಮಾಡಬೇಕಾದ ಮತ್ತು ಮಾಡಬಾರದ ಕೆಲಸದ ಬಗ್ಗೆ ತಿಳುವಳಿಕೆ ನೀಡುವುದು.

ಮೊದಲು ಕೇಂದ್ರದಲ್ಲಿ ಹಿರಿಯ ಮಕ್ಕಳಿಗೆ ಆಟ ಆಡಿಸಿ ನಂತರ ಎಲ್ಲರೂ ಆಡಲು ಮಾರ್ಗದರ್ಶನ ಮಾಡುವುದು.

ಎಲ್ಲ ಮಕ್ಕಳ ಆಟ ಆಡುತ್ತಿರುವವರ ಬಗ್ಗೆ ಗಮನ ವಹಿಸುವುದು. ಆ ಆಟದಿಂದ ಸಂತಸ ಪಡೆಯುವಂತಿದ್ದಾರೆಯೇ ಎಂದು ಗಮನಿಸುವುದು.

**ಗ್ರಹಣ ಶಕ್ತಿ ಚಟುವಟಿಕೆಗಳು**

ಕಲಿಯಬೇಕಾದ ವಿಷಯಗಳ ಬಹುಭಾಗವನ್ನು ಮಕ್ಕಳು ಆಲಿಸುವಿಕೆಯ ಮೂಲಕ ಪಡೆದಿರುತ್ತಾರೆ. ಇದನ್ನು ಮಕ್ಕಳು ತಮ್ಮ ಆಂತರಿಕ ಜ್ಞಾನ ಸಂರಚನೆಯಲ್ಲಿ ಇವನ್ನು ಸಮನ್ವಯಗೊಳಿಸಿದಾಗ ಅರ್ಥಪೂರ್ಣ ಕಲಿಕೆಯಾಗುತ್ತವೆ. ಮಕ್ಕಳು ವಿಷಯವನ್ನು ತಾವೇ ಪತ್ತೆ ಹಚ್ಚಿದರೆ ಮಾತ್ರ ಅರ್ಥಪೂರ್ಣ ಕಲಿಕೆ ನಡೆಯುತ್ತದೆ. ವಿಷಯದ ಅಂತಿಮ ರೂಪವನ್ನು ತಾನು ಈಗಾಗಲೇ ತಿಳಿದಿರುವುದಕ್ಕೂ ಹೊಸ ವಸ್ತುವಿಗೂ ಸಂಬಂಧ ಕಲ್ಪಿಸುವುದರ ಮೂಲಕ ಕಲಿಯಲು ಪ್ರಯತ್ನಿಸಿದರೆ ಅರ್ಥಪೂರ್ಣ ಕಲಿಕೆಯಾಗಿ, ಈ ಅರ್ಥಪೂರ್ಣ ಸ್ವೀಕಾರವನ್ನು ಗ್ರಹಣಶಕ್ತಿ ಚಟುವಟಿಕೆಗಳು ಪೂರೈಸುತ್ತದೆ.

**ಚಟುವಟಿಕೆಯ ಉದ್ದೇಶಗಳು**

೧. ಅಂಗನವಾಡಿ ಕೇಂದ್ರಗಳಲ್ಲಿ ಮಕ್ಕಳ ಅವಧಾನವನ್ನು ಸೆಳೆದು, ಕ್ರಿಯಾಶೀಲರಾಗಿರುವಂತೆ ಮಾಡಲು.

೨. ಇಂದ್ರಿಯ ಗ್ರಹಿಕೆ ಸಾಮರ್ಥ್ಯ ಹೆಚ್ಚಿಸಲು.

೩. ಮಕ್ಕಳಲ್ಲಿ ಆಲೋಚನಾ ಶಕ್ತಿ, ತಾರ್ಕಿಕ ಚಿಂತನಾ ಶಕ್ತಿ ಬೆಳೆಸುವ ಸಾಮರ್ಥ್ಯ ಮೂಡಿಸಲು.

೪. ವಿಶೇಷಣಾ ಮನೋಭಾವ ಬೆಳೆಸಲು.

೫. ಸರಿ ತಪ್ಪುಗಳ ನಿರ್ಣಯ ತೆಗೆದುಕೊಳ್ಳಲು.

೭. ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಪರಿಹಾರ ಕಂಡುಕೊಳ್ಳಲು.

೭. ಸೂಚನೆಗಳನ್ನು ಪಾಲಿಸುವ ಮನೋಭಾವ ಬೆಳೆಸಲು.

೮. ಪರಿಸರ ಸ್ವಚ್ಛವಾಗಿಡುವ ಬಗ್ಗೆ ತಿಳಿವಳಿಕೆ ಮೂಡಿಸಲು.

೯. ಹೊಸ ಪದಗಳ ಪರಿಚಯ ಮತ್ತು ಭಾಷಾ ಸಂಪತ್ತು ಹೆಚ್ಚಿಸಲು.

೧೦. ಉತ್ತಮ ಪದಗಳು, ಭಾವನೆಗಳನ್ನು ಬೆಳೆಸಲು, ಭಾವನೆಗಳನ್ನು ನಿಯಂತ್ರಿಸುವ ಸಾಮರ್ಥ್ಯ ಬೆಳೆಸಲು.

೧೧. ಉತ್ತಮವಾದುದನ್ನು ಗುರ್ತಿಸಿ ಸ್ವೀಕರಿಸುವ ಮನೋಭಾವ ಮೂಡಿಸಲು.

**ಈ ಚಟುವಟಿಕೆಯ ಲಕ್ಷಣಗಳು**

ಚಟುವಟಿಕೆಗಳು ಪರಿಕಲ್ಪನೆಗೆ ಸಂಬಂಧಿಸಿದಂತೆ ಇದ್ದು ಪರಿಕಲ್ಪನೆಯ ಬಗ್ಗೆ ಅರಿವು ಮೂಡಿಸುವಂತಿರಬೇಕು.

ಸಮಸ್ಯೆಗೆ ಪರಿಹಾರ ಸಿಗುವಂತೆ ಇರಬೇಕು.

ಹೊಸದರಲ್ಲಿ ಪರಿಕಲ್ಪನೆಗಳನ್ನು ಪತ್ತೆ ಹಚ್ಚುವಂತೆ ಇರಬೇಕು.

ಪರಿಕಲ್ಪನೆಗಳಿಗೆ ಸ್ವ ಅನುಭವದಿಂದ ಅರ್ಥ ಕೊಡುವಂತೆ ಇರಬೇಕು.

ಮಕ್ಕಳ ವಯೋಮಾನಕ್ಕೆ ತಕ್ಕಂತಹ ಚಟುವಟಿಕೆ ರೂಪಿಸುವುದು.

ಚಟುವಟಿಕೆಗಳಿಗೆ ಬಳಸುವ ಕಲಿಕಾ ಸಾಮಗ್ರಿಗಳ ಅಪಾಯದಿಂದ ದೂರವಿರಬೇಕು.

ಮಕ್ಕಳಿಗೆ ಸೃಜನಶೀಲತೆಯನ್ನು ಮೂಡಿಸುವಂತೆ ಇರಬೇಕು.

ಚಟುವಟಿಕೆಗಳಲ್ಲಿ ಆಸಕ್ತಿದಾಯಕವಾಗಿ ಭಾಗವಹಿಸುವಂತೆ ಇರಬೇಕು.

**ಈ ಚಟುವಟಿಕೆಯನ್ನು ಮೂಡಿಸಬಹುದಾದ ವಿಧಾನ**

ಹೊರ ಸಂಚಾರ, ದೃಶ್ಯ ರಚನೆ, ಪರಿಸರ ಸ್ವಚ್ಛತೆ, ಚಾರ್ಟ್ ಬಳಕೆ, ಬೇಕು ಬೇಡ ಚಟುವಟಿಕೆ ಸಂಭಾಷಣೆ ಸಮಸ್ಯೆ, ಸಮಸ್ಯೆ ಬಿಡಿಸುವುದು, ಫಜಿಲ್ ಜೋಡಣೆ.

**ಈ ಚಟುವಟಿಕೆಯ ಮಕ್ಕಳ ಬೆಳವಣಿಗೆ ಪೂರಕ**

ಮಕ್ಕಳು ಕೇಂದ್ರಗಳಲ್ಲಿ ಕ್ರಿಯಾಶೀಲರಾಗಿ, ಸೃಜನಶೀಲರಾಗಿರುವಂತೆ ಸಂತಸದಾಯಕವಾಗಿರುವ ಪರಿಸರ ನಿರ್ಮಾಣ ಮಾಡಬಹುದು.

ಚಟುವಟಿಕೆಗಳ ಮೂಲಕ ದೇಹದ ದೊಡ್ಡ ಸ್ನಾಯುಗಳು ಮತ್ತು ಸಣ್ಣ ಸ್ನಾಯುಗಳ ಬೆಳವಣಿಗೆಗೆ ಅಗತ್ಯ ಪರಿಸರ ನಿರ್ಮಾಣ ಮಾಡಲು ಸಹಾಯಕವಾಗಿದೆ.

ದೇಹ ಮತ್ತು ಮನಸ್ಸಿನ ಸಮನ್ವಯತೆಯ ಅಭ್ಯಾಸ ಮೂಡಿಸುತ್ತದೆ.

ಆಕಾರ, ಗಾತ್ರ ಸ್ಪರ್ಶದ ಪರಿಚಯದೊಂದಿಗೆ ಜ್ಞಾನಾತ್ಮಕ ಬೆಳವಣಿಗೆಯಾಗುತ್ತದೆ.

ಕ್ರಿಯಾಶೀಲತೆಯಿಂದ ಏಕಾಗ್ರತೆ ಹೆಚ್ಚಿಸಲು ಸಾಧ್ಯವಾಗುತ್ತದೆ.

ಚಟುವಟಿಕೆ ಮಾಡುವಾಗ ಬಳಸುವ ಪದಶಬ್ದಗಳು ಅವರಿಗೆ ಆ ಪದಗಳ ಅರ್ಥ ತಿಳಿಸುವಲ್ಲಿ ಸಹಕಾರಿಯಾಗುತ್ತದೆ. ಮಕ್ಕಳ ಆಲಿಸುವಿಕೆ ಕೌಶಲ ಹೆಚ್ಚುತ್ತದೆ.

**ಕಥೆಗಳು**

ಅಂಗನವಾಡಿಯಲ್ಲಿ ಕಾರ್ಯಕರ್ತೆಯರು ಮಕ್ಕಳಿಗೆ ಕಥೆಗಳ ಹೇಳುವ ಮುಖಾಂತರ ಅವರಲ್ಲಿ ಅವಧಾನವನ್ನು ಮತ್ತು ಆಸಕ್ತಿಯನ್ನು ಹೆಚ್ಚಿಸುವ ಕಾರ್ಯವನ್ನು ಮಾಡುತ್ತಾಳೆ. ಕಥೆಗಳು ಮಗುವನ್ನು ಕಲ್ಪನಾ ಲೋಕಕ್ಕೆ ಕರೆದೊಯ್ದು ಹೊಸ ವಿಷಯ ತಿಳಿದುಕೊಳ್ಳಲು ಆಸಕ್ತಿ ಮೂಡಿಸುತ್ತದೆ. ಕಥೆಗಳ ಮೂಲಕ ಹೊಸ ಶಬ್ದಗಳು ಮಕ್ಕಳ ಕಿವಿಗೆ ಬಿದ್ದು ಶಬ್ದ ಭಂಡಾರ ಹೆಚ್ಚಿಸಲು ಸಹಾಯಕವಾಗಿದೆ. ಕಥೆಗಳು ಮಕ್ಕಳಲ್ಲಿ ಚಿಂತನೆಗೆ ಅವಕಾಶ ನೀಡಿ ಬೌದ್ಧಿಕ ವಿಕಸನಕ್ಕೆ ಸಹಾಯಕವಾಗಿದೆ.

**ಗಾಂಧೀಜಿಯವರ ಕಥೆ**

ಒಂದು ದಿವಸ ಗಾಂಧೀಜಿಯವರು ಒಂದು ಹಳ್ಳಿಗೆ ಹೋದರು. ಅಲ್ಲಿ ಒಂದು ಸಣ್ಣ ಗುಡಿಸಲಿನಲ್ಲಿ ಒಬ್ಬ ಮುದುಕಿಯನ್ನು ನೋಡಿದರು. ಆ ಮುದುಕಿಯ ಮೈಮೇಲಿದ್ದ ಸೀರೆಯನ್ನು ನೋಡಿ ಅಮ್ಮ ನಿಮ್ಮ ಸೀರೆ ಎಷ್ಟು ಕೊಳೆಯಾಗಿದೆ ಎಂದಾಗ ಆ ಮುದುಕಿಯು ಭಾಪು ನನಗೆ ಒಂದೇ ಸೀರೆ ಇದೆ. ಬೇರೆ ಸೀರೆ ಇಲ್ಲ ಎಂದಳು. ಈ ಮಾತನ್ನು ಕೇಳಿ ಗಾಂಧೀಜಿಯವರು ಬಹಳ ಮರುಗಿದರು. ಅಂದಿನಿಂದ ಸೂಟು ಬೂಟುಗಳನ್ನು ಗಾಂಧೀಜಿಯವರು ಹಾಕಲಿಲ್ಲ. ಗಾಂಧೀಜಿಯವರು ನಮ್ಮ ದೇಶವು ಬಡಜನರಿಂದ ತುಂಬಿದೆ ಎಂದು ತಿಳಿದು ಅಂದಿನಿಂದ ಅವರು ಚರಕದಿಂದ ನೂಲನ್ನು ತೆಗೆದು ಬಟ್ಟೆಯನ್ನು ನೇಯ್ದು ತಯಾರು ಮಾಡುವ ಶೈಲಿಯನ್ನು ಹೇಳಿಕೊಟ್ಟರು.

ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಗಾಂಧೀಜಿಯವರು ಕೆಲವು ಘಟನೆಗಳನ್ನು ನೋಡಿ ತಮ್ಮ ಜೀವನದ ಶೈಲಿಯನ್ನು ಬದಲಾಯಿಸಿಕೊಂಡರು. ಅವರ ಬದಲಾವಣೆಗೆ ಪ್ರಮುಖ ಕಾರಣ ಭಾರತದಲ್ಲಿರುವಂತಹ ಬಡತನ, ಅನಕ್ಷರತೆ, ನಿರುದ್ಯೋಗ, ಮೂಢನಂಬಿಕೆ, ಸಂಪ್ರದಾಯಗಳು ಕಾರಣವಾಗಿವೆ. ಗಾಂಧೀಜಿಯವರ ಕಥೆಯು ಭಾರತದ ಪ್ರತಿಯೊಂದು ವರ್ಗದವರನ್ನು ಬದಲಾವಣೆಯತ್ತ ಕೊಂಡೊಯುತ್ತದೆ. ರಾಷ್ಟ್ರದ ಮಹಾನ್ ನಾಯಕನೇ ತನ್ನ ಜೀವನ ಶೈಲಿಯನ್ನು ಬದಲಾಯಿಸಿಕೊಂಡನಲ್ಲ ನಾವೇಕೆ ಬದಲಾಯಿಸಿಕೊಳ್ಳಬಾರದು ಎಂಬ ಮನೋಭಾವನೆಯನ್ನು ಉಂಟುಮಾಡುತ್ತದೆ. ಮಕ್ಕಳಲ್ಲಿಯೂ ಸಹ ಸರಳ ಜೀವನವನ್ನು ರೂಢಿಸಿಕೊಳ್ಳಲು ಇದು ಪ್ರೇರಣೆಯ ಕಥೆಯಾಗಿದೆ. ಸಮಯವರಿತು ಸಂದರ್ಭಕ್ಕೆ ಅನುಗುಣವಾಗಿ ಬದುಕುವ ಕಲೆಯನ್ನು ಈ ಕಥೆಯಿಂದ ತಿಳಿಯಬಹುದು. ಪ್ರತಿಯೊಬ್ಬರೂ ಸೋಮಾರಿಗಳಾಗದೇ ಗಾಂಧಿಯಂತೆ ನಾವು ಸಹ ಸ್ವಕಾರ್ಯ ಮಾಡಬೇಕು. ಬೇರೆಯವರಿಗೂ ನೆರವಾಗಬೇಕು ಎಂಬ ಭಾವನೆ ಉಂಟಾಗುತ್ತದೆ. ಒಟ್ಟಾರೆಯಾಗಿ ಈ ಕಥೆಯು ಮಕ್ಕಳಲ್ಲಿ ಒಂದಲ್ಲ ಒಂದು ಕಾರ್ಯದಲ್ಲಿ ನಿರತರಾಗಬೇಕು, ಸರಳ ಜೀವನ ನಡೆಸಬೇಕು ಎಂಬುದನ್ನು ಪ್ರತಿಬಿಂಬಿಸುತ್ತದೆ.

**ಪುಣ್ಯಕೋಟಿ ಕಥೆ**

ಪುಣ್ಯಕೋಟಿ ಎಂಬ ಆಕಳು ದಿನಾಲು ಅಡವಿಗೆ ಆಹಾರ ಹುಡುಕುತ್ತಾ ಹೋಗುತ್ತಿತ್ತು. ಒಂದು ದಿವಸ ಹೀಗೆಯೇ ಆಹಾರ ಹುಡುಕುವಾಗ ಒಂದು ಹುಲಿಯು ಎದುರಿಗೆ ಬಂದಿತು. ಅದಕ್ಕೆ ಮುಂಜಾನೆಯಿಂದ ತಿರುಗಾಡಿದರೂ ಆಹಾರ ಸಿಕ್ಕಲಿಲ್ಲ. ಈಗ ಪುಣ್ಯಕೋಟಿಯು ಅದಕ್ಕೆ ಸಿಕ್ಕಿತು. ಹುಲಿಯು ಪುಣ್ಯಕೋಟಿಗೆ ನನಗೆ ಬಹಳ ಹಸಿವಾಗಿದೆ ನಾನು ನಿನ್ನನ್ನು ತಿನ್ನುತ್ತೇನೆ ಎಂದು ಹೇಳಿತು. ಅದಕ್ಕೆ ಪುಣ್ಯಕೋಟಿಯು ನಾನು ಮನೆಯಲ್ಲಿ ಯಾರಿಗೂ ಹೇಳಿ ಬಂದಿಲ್ಲ. ನನ್ನ ಕರು ನನಗಾಗಿ ಹಾದಿ ಕಾಯುತ್ತಿರುವುದು. ಅದಕ್ಕೆ ಮನೆಗೆ ಹೋಗಿ ಹೇಳಿ ಬರುತ್ತೇನೆ ಎಂದಿತು. ಆದರೆ ಹುಲಿಗೆ ಅದರ ಮೇಲೆ ಸಂಶಯ ಬಂದಿತು. ನೀನು ಮನೆಗೆ ಹೋದರೆ ಮರಳಿ ಬರುವುದಿಲ್ಲ. ನಾನು ನಿನ್ನನ್ನು ಈಗಲೇ ತಿನ್ನುತ್ತೇನೆ ಎಂದಿತು. ಆದರೆ ಪುಣ್ಯಕೋಟಿಯು ನಾನು ವಚನ ಕೊಡುತ್ತೇನೆ. ಸುಳ್ಳು ಮಾತಾಡುವುದಿಲ್ಲ. ಸತ್ಯವನ್ನೇ ಮಾತಾಡುತ್ತೇನೆ ಎಂದು ಹೇಳಿತು. ಆಗ ಹುಲಿಯ ಹೋಗು ಮರಳಿ ಬೇಗನೆ ಬಾ ನನ್ನ ಹೊಟ್ಟೆ ಹಸಿದಿದೆ ಎಂದು ಹೇಳಿತ್ತು. ಪುಣ್ಯಕೋಟಿಯು ಮನೆಗೆ ಬಂದು ತನ್ನ ಕರುವಿಗೆ ಹಾಲುಣಿಸಿ ನಾನು ಇನ್ನು ಬರುವುದಿಲ್ಲ. ಎಲ್ಲರೊಂದಿಗೆ ಚೆನ್ನಾಗಿ ಇರು ಎಂದು ಹೇಳಿ ಉಳಿದ ಆಕಳುಗಳಿಗೆ ತನ್ನ ಕರುವನ್ನು ಚೆನ್ನಾಗಿ ನೋಡಿಕೊಳ್ಳಿರಿ ಎಂದು ಹೇಳಿ ಕಾಡಿಗೆ ಬಂದಿತು. ಹುಲಿಯು ಬೆಟ್ಟದ ಮೇಲೆ ನಿಂತು. ಪುಣ್ಯಕೋಟಿಯ ಹಾದಿ ನೋಡುತ್ತಿತ್ತು. ಪುಣ್ಯಕೋಟಿಯು ಬಂದು ಹುಲಿರಾಯ ನಾನು ಹೇಳಿದಂತೆ ತಪ್ಪದೇ ಬಂದಿದ್ದೇನೆ. ನನ್ನನ್ನು ತಿಂದು ಹಸಿವೆಯನ್ನು ನೀಗಿಸಿಕೋ ಎಂದು ಹೇಳಿತು. ಆ ಹುಲಿಯು ನೀನು ನನ್ನಕ್ಕ ಇದ್ದಂತೆ. ಈಗ ನಾನು ನಿನ್ನನ್ನು ತಿಂದರೆ ನನ್ನ ಶಿವನು ಮೆಚ್ಚುವುದಿಲ್ಲ ಎಂದು ಹೇಳಿ ಬೆಟ್ಟದ ಮೇಲಿಂದ ಕೆಳಗೆ ಹಾರಿ ತನ್ನ ಪ್ರಾಣವನ್ನು ಬಿಟ್ಟಿತು.

ಭಾರತೀಯ ಸಮಾಜ ಸಂಸ್ಕೃತಿಯಿಂದ ಕೂಡಿದ್ದಾಗಿದೆ. ಪ್ರಪಂಚದಲ್ಲಿಯೇ ಭಾರತದ ಸಂಸ್ಕೃತಿ ಹೆಸರಾಗಿದೆ. ಪುಣ್ಯಕೋಟಿ ಕತೆಯು ನಮ್ಮ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಹ ಕೆಲಸ ಮಾಡಿದೆ. ಅಂದರೆ ಭಾರತೀಯರು ಕೊಟ್ಟ ಮಾತಿಗೆ ತಪ್ಪುವರಲ್ಲ, ಹೇಳಿದ ಕೆಲಸವನ್ನು ಮಾಡಿಯೇ ತೀರುತ್ತಾರೆ. ನಮ್ಮ ಜನತೆ ಸ್ವಾಭಿಮಾನಿಗಳು, ರಾಷ್ಟ್ರಭಕ್ತರು 'ದೇಶಾಭಿಮಾನಿಗಳು' ಭಾಷಾಭಿಮಾನಿಗಳು ಆಗಿದ್ದಾರೆ. ಇಲ್ಲಿ ಕವಿಯು ಹುಲಿಯನ್ನು ಪ್ರಶ್ನಿಸುವ ಹಾಗೂ ಪರೀಕ್ಷಿಸುವ ದಂಡನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಅದೇ ರೀತಿಯಾಗಿ ಹಸುವನ್ನು ಪರೀಕ್ಷೆಗೀಡು ಮಾಡಿದ್ದಾನೆ. ಈ ಪರೀಕ್ಷೆಯಲ್ಲಿ ಹಸುವು ಪಾಸಾಗುತ್ತದೆ. ಇದು ನಮಗೆ ಕೊಟ್ಟ ಮಾತಿಗೆ ತಪ್ಪುವವರಲ್ಲ ಎಂಬುದನ್ನು ತಿಳಿಸಿಕೊಂಡುತ್ತದೆ. ಹಾಗೆಯೇ ಕಥೆಯಲ್ಲಿ ತಾಯಿ ಮಗುವಿನ ಕರಳು ಬಳ್ಳಿಯ ಸಂಬಂಧವನ್ನು ಅತ್ಯಂತ ಕರುಣಾಜನಕದಿಂದ ಚಿತ್ರಿಸಿದ್ದಾನೆ. ಇದರಿಂದ ಮಕ್ಕಳಲ್ಲಿ ಹಿರಿಯರು ಗುರುಗಳು ಹೇಳಿದ ಮಾತನ್ನು ಕೇಳಬೇಕು ಕೊಟ್ಟ ಮಾತನ್ನು ತಪ್ಪದೇ ಪಾಲಿಸಬೇಕು ಎಂಬ ಭಾವನೆಯನ್ನುಂಟು ಮಾಡುತ್ತದೆ. ತಾಯಿ ಮಗುವನ್ನು ಬಿಟ್ಟು ಹೋಗುವಂತಹ ಸಂದರ್ಭದಲ್ಲಿ ತನ್ನ ಸಹಚರರ ಜೊತೆಗೆ ತನ್ನ ಮಗುವಿನ ಯೋಗಕ್ಷೇಮದ ಬಗ್ಗೆ

ಹೇಳುವುದು ಕರಳು ಮುಟ್ಟುವಂತಹ ಸಂದೇಶವಾಗಿದೆ. ಇದರಿಂದ ತಾಯಿಗೆ ಮಗುವಿನ ಮೇಲಿರುವ ಪ್ರೀತಿ, ಕಾಳಜಿಯನ್ನು ಗುರುತಿಸಬಹುದು. ಇಲ್ಲಿ ಕವಿಯು ಹುಲಿ ಮತ್ತು ಹಸುವನ್ನು ವಸ್ತುವನ್ನಾಗಿಟ್ಟುಕೊಂಡು ಸಂಸ್ಕೃತಿಯನ್ನು ಗುರುತಿಸುವ ಪ್ರತಿಬಿಂಬಿಸುವ ಕೆಲಸ ಮಾಡಿದ್ದಾರೆ.

**ಈ ಚಟುವಟಿಕೆಯ ಉದ್ದೇಶಗಳು**

೧. ಅಂಗನವಾಡಿ ಕೇಂದ್ರಗಳಲ್ಲಿ ಮಕ್ಕಳ ಅವಧಾನವನ್ನು ಸೆಳೆದು, ಆಸಕ್ತಿದಾಯಕವಾಗಿರುವಂತೆ ಮಾಡಲು.

೨. ತಿಳಿಸಬೇಕಾದ ಪರಿಕಲ್ಪನೆ ಬಗ್ಗೆ ಕುತೂಹಲ ಬೆಳೆಯುವಂತೆ ಮಾಡಲು.

೩. ಆಲಿಸುವ ಕೌಶಲ ಬೆಳೆಸಲು.

೪. ಹೊಸ ಪದಗಳ ಪರಿಚಯ ಮತ್ತು ಭಾಷಾ ಸಂಪತ್ತನ್ನು ಹೆಚ್ಚಿಸಲು.

೫. ಪುಣ್ಯಕೌಶಲ ಬೆಳೆಸಲು.

೬. ಸಹಬಾಳ್ವೆ, ಸಹಕಾರ, ಶಿಸ್ತು, ನಿಯಮ ಪಾಲನೆ ಮೊದಲಾದ ಅಗತ್ಯ ಮೌಲ್ಯಗಳನ್ನು ಬೆಳೆಸಲು.

೭. ಉತ್ತಮ ಸಕಾರಾತ್ಮಕ ಭಾವನೆಗಳನ್ನು ಬೆಳೆಸಲು.

೮. ಉತ್ತಮವಾದುದನ್ನು ಗುರ್ತಿಸಿ ಸ್ವೀಕರಿಸುವ ಮನೋಭಾವ ಮೂಡಿಸಲು

**ಚಟುವಟಿಕೆಯ ಲಕ್ಷಣಗಳ**

೧. ಸರಳವಾದ ಮಕ್ಕಳಿಗೆ ಅರ್ಥವಾಗುವಂತಹ ಪದಗಳ ಬಳಕೆಯಿರಬೇಕು.

೨. ಆಯ್ಕೆ ಮಾಡಿದ ಪರಿಕಲ್ಪನೆಗೆ ಸಂಬಂಧಿಸಿದಂತೆ ಇರಬೇಕು.

೩. ನೈಜತೆಯ ಅರಿವು ಮೂಡಿಸುವಂತೆ ಇರಬೇಕು.

೪. ಸ್ಥಳೀಯ ಸಂಪನ್ಮೂಲಗಳ ಬಳಕೆ ಮಾಡಿಕೊಳ್ಳುವಂತಿರಬೇಕು.

**ಈ ಚಟುವಟಿಕೆಗಳು ಮಕ್ಕಳ ಬೆಳವಣಿಗೆ ಪೂರಕ**

೧. ಭಾಷಾ ಬೆಳವಣಿಗೆಯಲ್ಲಿ ಮಕ್ಕಳು ಆಲಿಸುವ ಪ್ರಕ್ರಿಯೆಗೆ ಹೆಚ್ಚು ತೆರೆದುಕೊಳ್ಳಬೇಕು. ಕಥೆ ಚಟುವಟಿಕೆಯು ಈ ಅವಶ್ಯಕತೆಯನ್ನು ಪೂರೈಸುತ್ತದೆ. ಮಕ್ಕಳ ಆಲಿಸುವಿಕೆ ಕೌಶಲ ಹೆಚ್ಚುತ್ತದೆ.

೨. ಕಥೆಯನ್ನು ಹೇಳುವಾಗ ಕಥೆಯಲ್ಲಿ ಬರುವ ಹೊಸ ಪದಗಳು ಮಕ್ಕಳ ಭಾಷಾ ಸಂಪತ್ತನ್ನು ಹೆಚ್ಚಿಸಲು ಸಹಕಾರಿಯಾಗಿದೆ.

೩. ಕಥೆಗಳು ಮಕ್ಕಳಲ್ಲಿ ಆಸಕ್ತಿ, ಕುತೂಹಲ, ಊಹಿಸುವುದು, ತಾರ್ಕಿಕ ಚಿಂತನೆ ಮೊದಲಾದ ಸಾಮರ್ಥ್ಯಗಳನ್ನು ಬೆಳೆಸುವಲ್ಲಿ ಸಹಕಾರಿಯಾಗಿವೆ.

೪. ಪ್ರಶ್ನೆಗಳನ್ನು ಮೂಡಿಸುವುದರ ಮೂಲಕ ವಿಷಯಗಳನ್ನು ತಿಳಿದುಕೊಳ್ಳುವ ಪ್ರಕ್ರಿಯೆಗೆ ಮಕ್ಕಳನ್ನು ತನ್ನಂತಾನೇ ತೊಡಗಿಕೊಳ್ಳುವರು. ಇದರಿಂದ ಬೌದ್ಧಿಕ ಕೌಶಲ್ಯ ಬೆಳೆಸುತ್ತದೆ.

೫. ಕಥೆಯಲ್ಲಿ ಬರುವ ಮೌಲ್ಯಗಳು, ಧನಾತ್ಮಕ ಚಿಂತನೆಗಳು ಸಾಮಾಜಿಕ ಬೆಳವಣಿಗೆಗೆ ಸಹಾಯಕಾರಿಯಾಗಿದೆ.

೬. ಕಥೆಯಲ್ಲಿ ಬರುವ ಮಾನವ ಸಂಬಂಧಗಳು, ಪ್ರಾಣಿ ಪಕ್ಷಿ, ಗಿಡ ಮರಗಳ ಸಂಬಂಧ ಸಾಮಾಜಿಕ ಬಂಧನಕ್ಕೆ ಎಡೆ ಮಾಡಿಕೊಡುತ್ತದೆ.

# ಅಧ್ಯಾಯ ನಾಲ್ಕು

೧. ಸ್ತ್ರೀ ಶಕ್ತಿ

೨. ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳು

೩. ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳ ಕುರಿತು ಪರಿಹಾರೋಪಾಯಗಳು

೪. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯಲ್ಲಿ ಸರಕಾರದ ಯೋಜನೆಗಳು

# ಅಧ್ಯಾಯ ನಾಲ್ಕು

## ೪.೧. ಸ್ತ್ರೀಶಕ್ತಿ

ಹದಿನೈದರಿಂದ ಇಪ್ಪತ್ತು ಹೆಂಗಸರು ಸೇರಿ ಕಟ್ಟಿಕೊಂಡ ಸ್ತ್ರೀ ಶಕ್ತಿ ಸ್ವಸಹಾಯ ಗುಂಪು ಯಾವ ಅಬ್ಬರವೂ ಇಲ್ಲದೆ ದೊಡ್ಡ ಕ್ರಾಂತಿ ಮಾಡದೆ ಹೆಣ್ಣಿನಲ್ಲಿ ಸ್ವಾಭಾವಿಕವಾಗಿಯೇ ಇದ್ದ ಗಂಡನಿಗೆ, ಮಕ್ಕಳಿಗೆ ಕಾಣದಂತೆ, ಕಂಡರೆ ಕಿತ್ತುಕೊಳ್ಳುವರೆಂಬ ಆತಂಕ ಕೂಡಿಡುವ ಸ್ವಭಾವಕ್ಕೆ ಇಂದು ಅಧಿಕೃತತೆ ಪ್ರಾಪ್ತವಾಗಿದೆ. ತನ್ನ ಉಳಿತಾಯವನ್ನು ಬಹಿರಂಗವಾಗಿಯೇ ಬ್ಯಾಂಕಿನಲ್ಲಿ ಇಡುತ್ತಿದ್ದಾಳೆ. ಸ್ವಭಾವತಃ ಕ್ರಿಯಾಶೀಲಳಾದ ಹೆಣ್ಣು ತನ್ನ ಉತ್ಪಾದನೆ ಮತ್ತು ಸಂಗ್ರಹ ಗುಣದಿಂದಲೇ ಸಾಮಾಜಿಕ, ಆರ್ಥಿಕ ಮೇಲುಗೈನಲ್ಲಿದ್ದ ಪುರುಷನನ್ನು ಮೆಟ್ಟಿ ನಿಲ್ಲುತ್ತಿದ್ದಾಳೆ. ಕಳೆದ ಐದು ವರ್ಷಗಳಲ್ಲಿ ರಾಜ್ಯದಲ್ಲಿ ಎರಡೂವರೆ ಲಕ್ಷಕ್ಕೂ ಹೆಚ್ಚು ಸ್ವಸಹಾಯ ಗುಂಪುಗಳು ರಚಿತವಾಗಿವೆ. ಅವು ಒಂದು ಸಾವಿರ ಕೋಟಿಗೂ ಹೆಚ್ಚು ಹಣವನ್ನು ಉಳಿಸಿವೆ. ಹೆಣ್ಣಿಗಿರುವ ಈ ದೊಡ್ಡ ಶಕ್ತಿ ನಿಧಾನವಾಗಿ ಪುರುಷನಿಗೆ ಅರ್ಥವಾಗತೊಡಗಿದೆ. ಇದರ ಹಿನ್ನೆಲೆ ಮತ್ತು ಬೆಳವಣಿಗೆ ಇಲ್ಲಿದೆ.

ಬೀಜಿಂಗ್‌ನಲ್ಲಿ ನಡೆದ ಅಂತಾರಾಷ್ಟ್ರೀಯ ಮಹಿಳಾ ಸಮಾವೇಶ(೧೯೯೫) ನಮ್ಮ ಸಾಮಾಜಿಕ ರಚನೆಯಲ್ಲಿರುವ ಅಧಿಕಾರ ಮತ್ತು ಸಂಪನ್ಮೂಲಗಳ ಮೇಲಿನ ಪುರುಷನ ನಿಯಂತ್ರಣವನ್ನು ನಿಧಾನವಾಗಿಯಾದರೂ ಸಮಾನವಾಗಿ ಸ್ತ್ರೀಯರ ನಿಯಂತ್ರಣಕ್ಕೂ ತರುವುದು ಹೇಗೆಂದು ಚಿಂತಿಸಿತು. ಹೀಗಾಗಿ ಸಮಾನತೆಯ ಪರಿಕಲ್ಪನೆಯಲ್ಲಿ ಸ್ತ್ರೀಯರನ್ನು ಸಬಲಗೊಳಿಸುವುದು ಜಾಗತಿಕ ಚಿಂತನೆಯಾಯಿತು. ಈ ಹಿನ್ನೆಲೆಯಲ್ಲಿ ಮಹಿಳೆಯರಲ್ಲಿ ಗಳಿಸುವ ಮತ್ತು ಉಳಿಸುವ ಮನೋಭಾವನೆಗಳನ್ನು ಜಾಗೃತಗೊಳಿಸುವುದು ಅಗತ್ಯವೆನಿಸಿತು. ಇದೇ ವೇಳೆಗೆ ಬಾಂಗ್ಲಾ, ಫಿಲಿಫೈನ್ಸ್‌ನಂತಹ ಪುಟ್ಟ ದೇಶಗಳು ಸ್ತ್ರೀಯರಲ್ಲಿ ಉಳಿತಾಯವನ್ನು ಉತ್ತೇಜಿಸಿ ಜಾಗೃತಿ ಮೂಡಿಸುವುದರ ಮೂಲಕ ಸಶಕ್ತರನ್ನಾಗಿಸಿದ್ದು ಯಶಸ್ವಿ ಪ್ರಯೋಗವಾಗಿ ಲೋಕಪ್ರಸಿದ್ಧಿಯಾಯಿತು. ಇದನ್ನರಿತ ಭಾರತ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆ ೧೯೯೯ರಲ್ಲಿ ಸ್ವಶಕ್ತಿ ಎಂಬ ಪ್ರಾಯೋಗಿಕ ಯೋಜನೆಯನ್ನು ದೇಶದ ೯ ರಾಜ್ಯಗಳಲ್ಲಿ (ಬಿಹಾರ, ಛತ್ತೀಸ್‌ಘಡ್, ಗುಜರಾತ್, ಹರ‍್ಯಾಣ, ಜಾರ್ಖಂಡ್, ಕರ್ನಾಟಕ, ಮಧ್ಯಪ್ರದೇಶ, ಉತ್ತರ ಪ್ರದೇಶ

ಮತ್ತು ಉತ್ತರಾಂಚಲ) ಜಾರಿಗೊಳಿಸಿತು. ಸ್ವಶಕ್ತಿ ಯೋಜನೆಯಲ್ಲಿದ್ದ ಗುಣಾತ್ಮಕ ಅಂಶಗಳಿಗೆ ಬಹುಬೇಗ ಸ್ಪಂದಸಿದವರೆಂದರೆ ಕರ್ನಾಟಕದ ಅಂದಿನ ಮುಖ್ಯಮಂತ್ರಿಗಳಾಗಿದ್ದ ಎಸ್.ಎಂ.ಕೃಷ್ಣ ಮತ್ತು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮಂತ್ರಿಯಾಗಿದ್ದ ಮೋಟಮ್ಮನವರು. ಈ ಇವರ ಸಂಕಲ್ಪ ಬಲದಿಂದ ೨೦೦೦ದಲ್ಲಿ ಸ್ತ್ರೀ ಶಕ್ತಿ ಸ್ವಸಹಾಯ ಗುಂಪುಗಳ ರಚನೆಗಳ ಮೂಲಕ ಸ್ತ್ರೀಯರಲ್ಲಿ ಉಳಿತಾಯವನ್ನು ಉತ್ತೇಜಿಸಿ ಅವರ ಉಳಿತಾಯದಿಂದಲೇ ಅವರನ್ನು ಸಬಲರನ್ನಾಗಿಸುವ ನೂತನ ಯೋಜನೆಯನ್ನು ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯಾರಂಭ ಮಾಡಿದರು. ಸ್ತ್ರೀಯರ ಸಶಕ್ತತೆ ಹಳ್ಳಿಗಳಿಗೆ ಸೀಮಿತವಲ್ಲ. ನಗರಗಳಿಗೂ ಬೇಕೆಂದು ಮನಗಂಡು ಈ ಯೋಜನೆಯನ್ನು ನಗರಗಳಿಗೂ ವಿಸ್ತರಿಸಲಾಯಿತು. ಇದೊಂದು ಯಶಸ್ವಿ ಪ್ರಯೋಗವಾಗಿ ಕರ್ನಾಟಕದ ಸಾಧನೆಯನ್ನು ಮೆಚ್ಚಿ 'ನಬಾರ್ಡ್' ಸಂಸ್ಥೆ ರಾಷ್ಟ್ರ ಮಟ್ಟದಲ್ಲಿ ಗೌರವಿಸಿತು.

ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶನದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಮೂಲಕ ಸರ್ಕಾರದಿಂದ ನೇರವಾಗಿ ಸ್ವಸಹಾಯ ಸಂಘಗಳು ರೂಪುಗೊಂಡು ಕಾರ್ಯಾರಂಭ ಮಾಡುತ್ತಿವೆ. ಇದಕ್ಕೆ ಸಮಾನಾಂತರವಾಗಿ ಸ್ವಯಂ ಸೇವಾ ಸಂಸ್ಥೆಗಳು ತಮ್ಮ ಸಾಮಾಜಿಕ ಸೇವಾ ಕಾರ್ಯಕರ್ತರ ಮೂಲಕ ಸರ್ಕಾರದ ಆಶಯಕ್ಕನುಗುಣವಾಗಿ ಸ್ವಸಹಾಯ ಗುಂಪುಗಳನ್ನು ರಚಿಸಿ ಮಾರ್ಗದರ್ಶನ ಮಾಡುತ್ತಿವೆ.

ಸ್ತ್ರೀಶಕ್ತಿ ಯೋಜನೆಯನ್ನು ಗ್ರಾಮೀಣ ಮಹಿಳೆಯರ ಸಬಲೀಕರಣ ಹಾಗೂ ಸ್ವಾವಲಂಬಿಗಳಾಗಿಸುವುದನ್ನು ಮುಖ್ಯ ಗುರಿಯನ್ನಾಗಿರಿಸಿಕೊಂಡು ದಿನಾಂಕ ೧೮-೧೦-೨೦೦೦ ರಂದು ಅನುಷ್ಠಾನಗೊಳಿಸಲಾಯಿತು. ಗ್ರಾಮೀಣ ಪ್ರದೇಶದಲ್ಲಿ ಒಂದು ಲಕ್ಷ ಸ್ವಸಹಾಯ ಗುಂಪುಗಳನ್ನು ೨೭ ಜಿಲ್ಲೆಯ ಎಲ್ಲ ತಾಲ್ಲೂಕಿನ ೪೦೩೦೧ ಅಂಗನವಾಡಿ ಕೇಂದ್ರಗಳ ಮೂಲಕ ರಚಿಸಲಾಗಿದೆ.

ವಿವಿಧ ಇಲಾಖೆಗಳನ್ನು ಒಮ್ಮುಖಗೊಳಿಸುವುದರ ಮೂಲಕ ಮಹಿಳಾ ಗುಂಪಿನ ಸದಸ್ಯ ವಿವಿಧ ಇಲಾಖೆಗಳ ಅಭಿವೃದ್ಧಿ ಕಾರ್ಯಕ್ರಮಗಳ ಫಲ ದೊರೆಯುವಂತೆ ಅವಕಾಶ ಕಲ್ಪಿಸುವುದು ಹಾಗೂ ಸಾಲ ನೀಡುವಂತಹ ಸಂಸ್ಥೆಗಳ ಸಾಮೀಪ್ಯ ಒದಗಿಸುವುದರ ಜೊತೆಗೆ ಸಾಲ ದೊರೆಯುವಂತೆ ಕ್ರಮ ಕೈಗೊಳ್ಳುವುದು.

ಪ್ರತಿ ಗುಂಪಿಗೆ ತಲಾ ೫೦೦೦/- ರೂಪಾಯಿಗಳಂತೆ ಸುತ್ತು ನೀಡಲಾಗುವುದು. ಪ್ರತಿ ಗುಂಪಿಗೆ ೬೦೦/- ರೂಪಾಯಿಗಳಂತೆ ಅವಶ್ಯವಿರುವ ಪುಸ್ತಕ ಹಾಗೂ ಟ್ಯಾಂಕುಗಳ ಒಳಗೊಂಡ ಕಿಟಕಿಗಳನ್ನು ವಿತರಿಸಲಾಗುವುದು.

೭೫೦೦೦/- ರೂಗಳಿಂದ ಒಂದು ಲಕ್ಷ ರೂಪಾಯಿಗಳವರೆಗೆ ಉಳಿತಾಯ ಮಾಡುವ ಗುಂಪುಗಳಿಗೆ ತಲಾ ೧೫೦೦೦/- ರೂಗಳಂತೆ ಒಂದು ಲಕ್ಷ ರೂಪಾಯಿಗಿಂತ ಅಧಿಕ ಉಳಿತಾಯ ಮಾಡುವ ಗುಂಪುಗಳಿಗೆ ತಲಾ ೨೦೦೦೦/- ರೂಪಾಯಿಗಳಂತೆ ಪ್ರೋತ್ಸಾಹ ಧನ ನೀಡಲಾಗುವುದು. ಗುಂಪುಗಳ ಬಲವರ್ಧನೆಗಾಗಿ

ವಿವಿಧ ರೀತಿಯ ತರಬೇತಿಯನ್ನು ಸದಸ್ಯರಿಗೆ ನೀಡಲಾಗುವುದು. ಗುಂಪಿನ ಉತ್ಪನ್ನಗಳಿಗೆ ಮಾರುಕಟ್ಟೆ ಸೌಲಭ್ಯವನ್ನು ಒದಗಿಸಲಾಗುವುದು.

ಗ್ರಾಮೀಣ ಪ್ರದೇಶದಲ್ಲಿ ಈ ಯೋಜನೆಯ ಉಸ್ತುವಾರಿಯನ್ನು ಪ್ರತಿಯೊಂದು ತಾಲ್ಲೂಕಿನ ಗ್ರಾಮಗಳಲ್ಲಿರುವ ಅಂಗನವಾಡಿ ಕಾರ್ಯಕರ್ತೆಯರು ನೋಡಿಕೊಳ್ಳುತ್ತಾರೆ. ಬಡತನ ರೇಖೆಗಿಂತ ಕೆಳಗೆ ವಾಸಿಸುತ್ತಿರುವ ಗ್ರಾಮೀಣ ಮಹಿಳೆಯರನ್ನು ಸೇರಿಸಿ ಸ್ವ-ಸಹಾಯ ಗುಂಪುಗಳನ್ನು ರಚಿಸುತ್ತಾರೆ. ಒಂದು ಗುಂಪಿನಲ್ಲಿ ೧೫ರಿಂದ ೨೦ ಮಹಿಳೆಯರನ್ನು ತೆಗೆದುಕೊಳ್ಳುತ್ತಾರೆ. ಅದರಂತೆ ಪ್ರತಿಯೊಬ್ಬ ಅಂಗನವಾಡಿ ಕಾರ್ಯಕರ್ತೆಯರು ೩ ಸಂಘಗಳನ್ನು ನಡೆಸಿಕೊಂಡು ಹೋಗುತ್ತಾರೆ.

## ಸ್ತ್ರೀ ಶಕ್ತಿ ಯೋಜನೆಯ ವ್ಯಾಪ್ತಿ

ಪ್ರತಿಯೊಂದು ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿರುವ ಅಂಗನವಾಡಿ ಕಾರ್ಯಕರ್ತೆಯರು ಸ್ವ-ಸಹಾಯ ಗುಂಪು ರಚಿಸಿ ನಡೆಸಿಕೊಂಡು ಹೋಗುವರು.

೧. ರಾಜ್ಯದಲ್ಲಿರುವ ಎಲ್ಲಾ ಕೇಂದ್ರಗಳಲ್ಲಿ ಸ್ವ-ಸಹಾಯ ಗುಂಪು ರಚನೆ ಮಾಡುವುದಿಲ್ಲ. ಏಕೆಂದರೆ ನಗರಗಳಲ್ಲಿ ಅಕ್ಷರಸ್ಥರು ಇರುತ್ತಾರೆ. ಆದ್ದರಿಂದ ಜಿಲ್ಲೆಯನ್ನು ಬಿಟ್ಟು ತಾಲ್ಲೂಕುಗಳಲ್ಲಿ ಮಾತ್ರ ರಚಿಸಲಾಗುತ್ತದೆ.

೨. ಗುಲಬರ್ಗಾ ಜಿಲ್ಲೆಯಲ್ಲಿ ಎಲ್ಲ ತಾಲ್ಲೂಕುಗಳಲ್ಲಿ ಒಟ್ಟಾರೆ ೬೫೦೦ ಗುಂಪುಗಳು ಕಾರ್ಯ ನಿರ್ವಹಿಸುತ್ತಿವೆ.

೩. ಮಹಿಳೆಯರಲ್ಲಿ ಅರಿವು ಮೂಡಿಸಿ ಸಂಘಟಿಸುವ ಕಾರ್ಯ ಜಾರಿಯಲ್ಲಿದೆ.

## ಸ್ತ್ರೀ ಶಕ್ತಿ ಯೋಜನೆಯ ಉದ್ದೇಶಗಳು

ಮಹಿಳೆಯರಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಮೂಡಿಸುವಂತಹ ಪ್ರಕ್ರಿಯೆಯನ್ನು ಬಲಪಡಿಸುವುದು.

ರಾಜ್ಯಾದ್ಯಂತ ೨೦೦೦-೦೧ನೇ ಸಾಲಿನಲ್ಲಿಯೇ ಒಂದು ಲಕ್ಷ ಸ್ವಸಹಾಯ ಮಹಿಳಾ ಗುಂಪುಗಳನ್ನು ರಚಿಸುವುದು ಹಾಗೂ ಅವರಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆ ಮೂಡಿಸಿ ಸಂಪನ್ಮೂಲಗಳ ಮೇಲೆ ಹತೋಟಿ ಹಾಗೂ ಸಾಮೀಪ್ಯವನ್ನು ಸಾಧಿಸುವುದು.

ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ ಬಡ ಮಹಿಳೆಯರ ಆದಾಯವನ್ನು ಹೆಚ್ಚಿಸಿ, ಅವರಲ್ಲಿ ಆರ್ಥಿಕ ಸ್ಥಿರತೆಯನ್ನು ಮೂಡಿಸುವುದು, ತನ್ಮೂಲಕ ಬಡತನ ನಿವಾರಣೆ ಮಾಡುವುದು.

ವಿವಿಧ ಇಲಾಖೆಗಳನ್ನು ಒಮ್ಮುಖಗೊಳಿಸುವುದರ ಮೂಲಕ ಮಹಿಳಾ ಗುಂಪಿನ ಸದಸ್ಯರಿಗೆ ವಿವಿಧ ಇಲಾಖೆಗಳ ಅಭಿವೃದ್ಧಿ ಕಾರ್ಯಕ್ರಮಗಳ ಫಲ ದೊರೆಯುವಂತೆ ಅವಕಾಶ ಕಲ್ಪಿಸುವುದು ಹಾಗೂ ಸಾಲ

ನೀಡುವಂತಹ ಸಂಸ್ಥೆಗಳಿಗೆ ಸಾಮೀಪ್ಯ ಒದಗಿಸುವುದರ ಜೊತೆಗೆ ಸಾಲ ದೊರೆಯುವಂತೆ ಕ್ರಮ ಕೈಗೊಳ್ಳುವುದು.

ಕನಿಷ್ಠ ಆರು ತಿಂಗಳು ಉಳಿತಾಯ ಮಾಡಿದ ಗುಂಪಿಗೆ ಸರ್ಕಾರದ ವತಿಯಿಂದ ಸುತ್ತುನಿಧಿಯಾಗಿ ೫೦೦೦ ರೂ.ಗಳನ್ನು ನೀಡುವುದು. ಗುಂಪಿನ ಸದಸ್ಯರ ಉಳಿತಾಯ ಹಾಗೂ ಸುತ್ತುನಿಧಿಯನ್ನು ಬಳಸಿಕೊಂಡು ಸದಸ್ಯರು ಸಾಲದ ಚಟುವಟಿಕೆಗಳನ್ನು ಪ್ರಾರಂಭಿಸುತ್ತಾರೆ. ಸದಸ್ಯರು ಪಡೆದ ಸಾಲವನ್ನು ಸಕಾಲಕ್ಕೆ ಮರುಪಾವತಿ ಮಾಡುತ್ತಿರುವ ಬಗ್ಗೆ ಅಥವಾ ದುರುಪಯೋಗದ ಬಗ್ಗೆ ಮೇಲ್ವಿಚಾರಕಿಯರು, ಸಹಾಯಕರು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸತತ ಉಸ್ತುವಾರಿ ನಡೆಸುತ್ತಾರೆ.

ಅಂಗನವಾಡಿ ಕಾರ್ಯಕರ್ತೆಯರು ಗ್ರಾಮೀಣ ಪ್ರದೇಶದಲ್ಲಿರುವ ಮಹಿಳೆಯರು ಆರ್ಥಿಕ ಪ್ರಗತಿಯನ್ನು ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಮೂಡಿಸುವಂತಹ ಪ್ರಕ್ರಿಯೆಯನ್ನು ಬಲಪಡಿಸುತ್ತಾರೆ. ರಾಜ್ಯಾದ್ಯಂತ ೨೦೦೦-೨೦೦೧ನೇ ಸಾಲಿನಲ್ಲಿ ಒಂದು ಲಕ್ಷ ಸ್ವ-ಸಹಾಯ ಮಹಿಳಾ ಗುಂಪುಗಳನ್ನು ರಚಿಸುವುದು ಹಾಗೂ ಅವರಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆ ಮೂಡಿಸಿ ಸಂಪನ್ಮೂಲಗಳ ಮೇಲೆ ಹತೋಟಿ ಹಾಗೂ ಸಾಮೀಪ್ಯವನ್ನು ಸಾಧಿಸುತ್ತಿದ್ದಾರೆ.

ಮಹಿಳೆಯರನ್ನು ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸುವುದರ ಮೂಲಕ ಬಡ ಮಹಿಳೆಯರ ಆದಾಯವನ್ನು ಹೆಚ್ಚಿಸಿ ಅವರಲ್ಲಿ ಆರ್ಥಿಕ ಸ್ಥಿತಿಗತಿಯನ್ನು ಮೂಡಿಸುವುದು, ತನ್ಮೂಲಕ ಬಡತನ ನಿವಾರಣೆ ಮಾಡಲು ಪ್ರಯತ್ನಿಸುತ್ತಿದ್ದಾರೆ.

ಗುಂಪುಗಳು ತಮ್ಮ ಚಟುವಟಿಕೆಗಳನ್ನು ನಡೆಸಲು ಮೊದಲ ೬ ತಿಂಗಳು ಮಾತ್ರ ಅಂಗನವಾಡಿ ಕಾರ್ಯಕರ್ತೆಯರು ಸಹಕಾರ ನೀಡುತ್ತಾರೆ. ೬ ತಿಂಗಳ ನಂತರ ಗುಂಪುಗಳು ಸಣ್ಣ ಪ್ರಮಾಣದಲ್ಲಿ ಆಂತರಿಕವಾದ ಚಟುವಟಿಕೆಗಳನ್ನು ಹಾಗೂ ಬ್ಯಾಂಕುಗಳಲ್ಲಿ ಕಡ್ಡಾಯವಾಗಿ ಉಳಿತಾಯ ಖಾತೆ ತೆರೆಯುವಂತೆ ಕ್ರಮ ತೆಗೆದುಕೊಳ್ಳುತ್ತಾರೆ. ಇಲಾಖೆಯ ಮೇಲ್ವಿಚಾರಕಿಯರು ಅಂಗನವಾಡಿ ಕಾರ್ಯಕರ್ತೆಯರಿಗೆ ಕಾಲಕಾಲಕ್ಕೆ ಮಾರ್ಗದರ್ಶನ ನೀಡುವುದರ ಜೊತೆಗೆ ಮೇಲ್ವಿಚಾರಣೆ ಮಾಡುತ್ತಾರೆ.

ಪ್ರತಿ ವಾರಕ್ಕೆ ಒಮ್ಮೆ ಗುಂಪಿನ ಸದಸ್ಯರನ್ನು ಅಂಗನವಾಡಿ ಕಾರ್ಯಕರ್ತೆಯರು ಸಭೆ ಕರೆದು ಅಭಿವೃದ್ಧಿ ವಿಷಯಗಳ ಬಗ್ಗೆ ಚರ್ಚಿಸಿ, ತಮ್ಮ ಬಡತನ ನಿವಾರಣೆ ಬಗ್ಗೆ ತಿಳಿಸುತ್ತಾರೆ. ಮಹಿಳೆಯರಿಗೆ ಆರೋಗ್ಯದ ಬಗ್ಗೆ ಪೌಷ್ಟಿಕ ಆಹಾರದ ಬಗ್ಗೆ ಮಾಹಿತಿ ನೀಡುತ್ತಾರೆ. ಅಂಗನವಾಡಿ ಕಾರ್ಯಕರ್ತೆಯರು ಕೆಲವು ಘೋಷಣೆಗಳನ್ನು ಮಾಡಿಸುವುದರ ಮೂಲಕ ಮಹಿಳಾ ಸದಸ್ಯರನ್ನು ಮತ್ತಷ್ಟು ಸಶಕ್ತರನ್ನಾಗಿ ಮಾಡುತ್ತಾರೆ.

**ಪ್ರತಿವಾರದ ಸಭೆಯ ಗುಂಪಿನ ಘೋಷಣೆ**

* ನಮ್ಮ ಕುಟುಂಬದಲ್ಲಿ ಮಕ್ಕಳನ್ನು ಗಂಡು ಹೆಣ್ಣು ಎಂಬ ಭೇದಭಾವವಿಲ್ಲದೆ ಬೆಳೆಸುತ್ತೇವೆ.

* ನಮ್ಮ ಹೆಣ್ಣು ಮಕ್ಕಳನ್ನು ಕಡ್ಡಾಯವಾಗಿ ಶಾಲೆಗೆ ಕಳುಹಿಸುತ್ತೇವೆ ಹಾಗೂ ಯಾವುದೇ ಕಾರಣಕ್ಕೂ ನಡುವಿನಲ್ಲಿ ಶಾಲೆ ಬಿಡಿಸುವುದಿಲ್ಲ.
* ನಮ್ಮ ಹೆಣ್ಣುಮಕ್ಕಳಿಗೆ ೧೮ ವರ್ಷ ವಯಸ್ಸಾದ ನಂತರವೇ ಮದುವೆ ಮಾಡುತ್ತೇವೆ.
* ನಮ್ಮ ಮನೆಯ ಅಂಗಳದಲ್ಲಿ ಕಡ್ಡಾಯವಾಗಿ ಎರಡು ಮರಗಳನ್ನು ನೆಡುತ್ತೇವೆ.
* ನನ್ನ ಹಿತ್ತಲಲ್ಲಿ ಹಸಿರು ಸೊಪ್ಪು, ತರಕಾರಿ ಬೆಳೆದು ನನ್ನ ಸಂಸಾರಕ್ಕೆ ಉಪಯೋಗಿಸುತ್ತೇವೆ. ಮಕ್ಕಳಿಗೆ ನಿಗದಿತ ಸಮಯದಲ್ಲಿ ಚುಚ್ಚುಮದ್ದು ಹಾಕಿಸುತ್ತೇವೆ. ಮಕ್ಕಳಿಗೆ ಯಾವುದೇ ರೀತಿಯ ಅಪೌಷ್ಟಿಕತೆ ಅಥವಾ ಮಾರಕ ರೋಗಗಳು ಬರದಂತೆ ನೋಡಿಕೊಳ್ಳುತ್ತೇವೆ.

ಮುಂತಾದ ಘೋಷಣೆಗಳನ್ನು ಅನುಷ್ಠಾನಗೊಳಿಸುವ ಮೂಲಕ ಯೋಜನೆಯ ಉದ್ದೇಶಗಳನ್ನು ಸಫಲಗೊಳಿಸುವ ನಿಟ್ಟಿನಲ್ಲಿ ತನ್ಮೂಲಕ ಕುಟುಂಬಗಳ ಕ್ಷೇಮಪಾಲನೆಯಲ್ಲಿ ಸ್ವಸಹಾಯ ಗುಂಪುಗಳು ಕಾರ್ಯೋನ್ಮುಖವಾಗಿವೆ.

ಇದರಿಂದ ಗಾಣದೆತ್ತಿನಂತೆ ಮನೆಯೊಳಗೆ ದುಡಿಯುತ್ತಿದ್ದ ಹೆಣ್ಣು ಮನೆಯಿಂದ ಹೊರ ಬರುವುದು ಸಾಧ್ಯವಾಗಿದೆ. ಹತ್ತಾರು ಜನರೊಡನೆ ಬೆರೆಯುವುದು, ವಿಚಾರ ವಿನಿಮಯ ನಡೆಸುವುದು, ಲೋಕ ವಿದ್ಯಮಾನಗಳನ್ನು ಅರಿಯುವುದು, ತನ್ನ ಕಷ್ಟಸುಖಗಳನ್ನು ಹೇಳಿಕೊಳ್ಳುವ ವೇದಿಕೆಯಾಗಿ ಸ್ತ್ರೀ ಶಕ್ತಿ ಗುಂಪು ನಿರ್ಮಾಣವಾಗಿದೆ.

ಎಲ್ಲ ಹೆಂಗಸರೂ ನಿತ್ಯವೂ ಗಳಿಸುತ್ತಾರೋ ಇಲ್ಲವೋ ತಿಳಿಯದು. ಆದರೆ ಉಳಿಸುತ್ತಿದ್ದಾರೆ. ಇದೇ ಆಶ್ಚರ್ಯಕರ ವಿಚಾರ, ತನ್ನ ಗಂಡನಿಂದ, ಮಕ್ಕಳಿಂದ ಅಥವಾ ತಾವೇ ಮನೆ ನಿರ್ವಹಣೆಯಲ್ಲಿ ಉಳಿಸುವುದರಿಂದ, ದುಡಿದು ಗಳಿಸುವುದರಿಂದ ಹಣವನ್ನು ಮಾತ್ರ ಶೇ.೯೯ ರಷ್ಟು ಮಂದಿ ಉಳಿತಾಯ ಮಾಡುತ್ತಿದ್ದಾರೆ. ಆದ್ದರಿಂದ ಹೆಣ್ಣಿನ ಉಳಿತಾಯ ಶಕ್ತಿ ಬದ್ಧತೆಯಿಂದ ಕೂಡಿದ್ದು ನಿರಂತರ ಪ್ರಕ್ರಿಯೆಯಾಗಿದೆ.

ತಾವು ಉಳಿತಾಯ ಮಾಡಿದ ಹಣದಲ್ಲಿ ಮತ್ತು ಬ್ಯಾಂಕಿನಿಂದ ಪಡೆದ ಸಾಲದಲ್ಲಿ ಹೆಂಗಸರು ತಮ್ಮ ನಿತ್ಯದ ಆರ್ಥಿಕ ಕೊರತೆಗಳನ್ನು ನೀಗಿಸಿಕೊಳ್ಳುತ್ತಿದ್ದಾರೆ. ಬಹುತೇಕ ಅಪವ್ಯಯವಾಗದಂತೆ ಹಣವನ್ನು ಖರ್ಚು ಮಾಡುತ್ತಿದ್ದಾರೆ. ಸಹಕಾರಿ ಬ್ಯಾಂಕುಗಳ ಜೊತೆ ಸ್ವಸಹಾಯ ಗುಂಪುಗಳ ಸಂಬಂಧವನ್ನು ಕಲ್ಪಿಸಿರುವುದರಿಂದ ಗುಂಪುಗಳು ತಾವು ಪಡೆದ ಸಾಲವನ್ನು ತಮ್ಮ ಸದಸ್ಯರಿಗೆ ವಿತರಿಸಿ ಅವರಿಂದ ಸಾಲ ವಸೂಲಿ ಮಾಡಿ ಬ್ಯಾಂಕುಗಳಿಗೆ ಪಾವತಿ ಮಾಡುತ್ತಿದ್ದಾರೆ. ಇದರಿಂದ ನೂರಕ್ಕೆ ನೂರು ಸಾಲ ಮರುಪಾವತಿಯಾಗುತ್ತಿದೆ. ಒಂದು ಕಾಲಕ್ಕೆ ಕೂಲಿ ಕಾರ್ಮಿಕರಿಗೆ ಯಾವ ಬ್ಯಾಂಕುಗಳೂ ಸಾಲ ನೀಡುತ್ತಿರಲಿಲ್ಲ. ಆದರೆ ಇಂದು ಬ್ಯಾಂಕುಗಳೇ ಕೈ ಬೀಸಿ ಕರೆಯುತ್ತಿವೆ. ಪೈಪೋಟಿಯಲ್ಲಿ ಒಂದೇ ಅರ್ಹತೆಯೆಂದರೆ ಸಾಲ ಪಡೆಯುವವರು ಸ್ವಸಹಾಯ ಗುಂಪಿನ ಸದಸ್ಯರಾಗಿರಬೇಕು. ಇದರಿಂದ ಸಾಲ ವಸೂಲಿ ವೆಚ್ಚ ಬ್ಯಾಂಕುಗಳಿಗೆ ಉಳಿತಾಯವಾಗಿ ಅವರ ಆರ್ಥಿಕ ಚಟುವಟಿಕೆ ಸಲೀಸಾಗಿದೆ.

ಸ್ವಸಹಾಯ ಸಂಘಗಳ ಮತ್ತೊಂದು ಲಾಭವೆಂದರೆ ಪ್ರಜಾಸತ್ತಾತ್ಮಕ ಪೌರತ್ವ ತರಬೇತಿಯನ್ನು ಮಹಿಳೆಯರು ತಮಗೇ ಅರಿವಿಲ್ಲದೆ ಪಡೆದುಕೊಳ್ಳುತ್ತಿದ್ದಾರೆ. ಸಾಮೂಹಿಕ ನಾಯಕತ್ವ, ತಮ್ಮ ಸಮಸ್ಯೆಗಳಿಗೆ ತಮ್ಮಲ್ಲಿಯೇ ಪರಿಹಾರ ಕಂಡುಕೊಳ್ಳುವುದು, ಸಂಘ ಶಕ್ತಿಯಲ್ಲಿ ನಂಬಿಕೆ ಇಡುವುದು ಬರುತ್ತಿದೆ. ಬ್ಯಾಂಕಿನ ವ್ಯವಹಾರದ ಮೂಲಕ ಲೋಕದ ಆರ್ಥಿಕ ವ್ಯವಹಾರಕ್ಕೆ ತೆರೆದುಕೊಳ್ಳುತ್ತಿದ್ದಾರೆ. ವಿದ್ಯಾವಂತರಿರಲಿ, ಅವಿದ್ಯಾವಂತರಿರಲಿ ವ್ಯಾವಹಾರಿಕ ಪ್ರಜ್ಞೆ ಬೆಳೆಯುತ್ತಿದೆ. ತಮ್ಮ ಸ್ವಶಕ್ತಿ ಮೇಲೆ ಭರವಸೆ ಹೆಚ್ಚಾಗುತ್ತಿದೆ. ಮೂಢನಂಬಿಕೆ, ಅಂಧಶ್ರದ್ಧೆ, ಮೌಢ್ಯತೆಗಳು ಕಡಿಮೆಯಾಗುತ್ತಿವೆ. ಅನಕ್ಷರತೆ, ಬಡತನ, ವರದಕ್ಷಿಣೆ, ಕೌಟುಂಬಿಕ ಹಿಂಸೆ, ಲಿಂಗ ಅಸಮಾನತೆ ಮಂತಾದ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡುವ ಮನೋಭಾವ ಬೆಳೆಯುತ್ತಿದೆ. ಬದುಕಿನಲ್ಲಿ ಎದುರಾಗುವ ಸಮಸ್ಯೆಗಳನ್ನು ದಿಟ್ಟತನದಿಂದ ಎದುರಿಸುವ ಸಂಕಲ್ಪ, ಬಲ ದೃಢಗೊಳ್ಳುತ್ತಿದೆ. ಮಹಿಳೆಯರಿಗೆ ತಮ್ಮ ಮನೆಯಲ್ಲಿ ಗಂಡನಿಂದ, ಹಿರಿಯರಿಂದ, ಗೌರವಾದರಗಳು ಸಿಗುತ್ತಿವೆ. ಕುಟುಂಬದಲ್ಲಿ ಯಾವುದೇ ಕೆಲಸ ಮಾಡಲು ಅವಳನ್ನೂ ಕೇಳಬೇಕೆಂಬ ಅರಿವು ಮೂಡುತ್ತಿದೆ. ತಮ್ಮ ತಮ್ಮ ಗಂಡಂದಿರ ಲೋಪದೋಷಗಳನ್ನು, ದುರಭ್ಯಾಸಗಳನ್ನು ವಿಮರ್ಶಿಸುವ, ತಿಳಿಹೇಳುವ ಪ್ರೌಢತೆ ಪಡೆದುಕೊಳ್ಳುತ್ತಿದ್ದಾರೆ. ಗ್ರಾಮಗಳಲ್ಲಿ ನಡೆಯುವ ಯಾವುದೇ ಕಾರ್ಯಚಟುವಟಿಕೆಗಳಲ್ಲಿ ಸ್ವಸಹಾಯ ಗುಂಪುಗಳ ಭಾಗವಹಿಸುವಿಕೆಯೂ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿದೆ. ಬಡ ಜನರ ಜೀವನ ಮಟ್ಟ ಸುಧಾರಣೆಯಾಗುತ್ತಿದೆ. ಇಂಥ ಬಹು ದೊಡ್ಡ ಪರಿವರ್ತನೆ ಸ್ತ್ರೀ ಶಕ್ತಿಯಿಂದ ಸಾಧ್ಯವಾಗಿದೆ.

ಸ್ತ್ರೀವಾದವು ಪ್ರತಿಪಾದಿಸುವ ಅರಿವು, ಆತ್ಮವಿಶ್ವಾಸ, ಆತ್ಮಗೌರವದ ಬದುಕು ಸ್ವಂತ ನಿರ್ಧಾರದ ನಿಲುವು, ಸಂಪನ್ಮೂಲದ ಮೇಲೆ ನಿಯಂತ್ರಣ, ಸ್ವಾವಲಂಬನೆ, ಸಮಾನತೆ ಸಾಧಿಸುವುದು, ಆಯ್ಕೆಯ ಹಕ್ಕು, ಉತ್ಪಾದನಾ ಸಾಮರ್ಥ್ಯ ವೃದ್ಧಿ ಮತ್ತು ಕೌಶಲ್ಯ ಹಾಗೂ ಸಾಮರ್ಥ್ಯಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಶಕ್ತಿ, ಹೆಣ್ಣಿಗೆ ಇಂಥ ಸ್ವಸಹಾಯ ಗುಂಪಿನ ಸಾಮುದಾಯಿಕ ಸಂಘಟನೆಯಿಂದ ಸಾಧ್ಯವಾಗಿದೆ.

ಇಷ್ಟೆಲ್ಲ ಗುಣಾತ್ಮಕ ಚಲನೆ ಸ್ವಸಹಾಯ ಗುಂಪುಗಳಿದ್ದರೂ ಸಂಪೂರ್ಣ ಯಶಸ್ಸನ್ನು ಸಾಧಿಸಿಬಿಟ್ಟಿವೆ ಎಂದು ನಂಬುವಂತಿಲ್ಲ. ಆದ್ದರಿಂದ ಅನೇಕ ಮಿತಿಗಳ ನಡುವೆಯೇ ಇವು ಕಾರ್ಯ ನಿರ್ವಹಿಸುತ್ತಿವೆ. ಅವುಗಳೆಂದರೆ:

ಕೆಲವು ಸ್ವಸಹಾಯ ಗುಂಪುಗಳು ಜಾತಿ, ಧರ್ಮಗಳ ಹಿನ್ನೆಲೆಯಲ್ಲಿ ಸಂಘಟಿತವಾಗಿವೆ. ಇದು ಜಾತ್ಯತೀತ ಮನೋಭಾವಕ್ಕೆ ವಿರುದ್ಧವಾದ ಪ್ರಕ್ರಿಯೆಯಾಗಿದ್ದು, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಂಬಿಕೆಯಿಟ್ಟಿರುವ ಯಾರಿಗಾದರೂ ಇಂಥ ಸಂಘಟನೆಗಳು ಆರೋಗ್ಯಕರ ಮನಸ್ಸುಗಳನ್ನು ಹುಟ್ಟು ಹಾಕುತ್ತವೆ ಎಂದು ಎನಿಸುವುದಿಲ್ಲ.

ನಿರಂತರ ಉಳಿತಾಯ ಕಡ್ಡಾಯವಾಗಿರಬೇಕೆಂಬುದು ಸರಿಯಾದ ಉದ್ದೇಶವೇ ಆಗಿದ್ದರೂ ನಿರಂತರವಾಗಿ ಹೆಣ್ಣು ಗಳಿಸದೇ ಹೋದರೆ ತನ್ನ ಗಳಿಕೆಯಲ್ಲಿ ಉಳಿಸದೆ ಬೇರೆ ಮೂಲದಿಂದ ಮಾಡಿದ ಉಳಿತಾಯವೆಂದರೆ ಸಾಲ ಪಡೆಯುವುದು, ಅದರ ಖರ್ಚು ಇತ್ಯಾದಿ ಎಲ್ಲವೂ ಉಳಿತಾಯಕ್ಕೆ ನೆರವಾದವರ ನಿಲುವಿನಂತೆ ಇವರು ನಡೆದುಕೊಳ್ಳಬೇಕಾಗುತ್ತದೆ. ಸ್ವಂತ ಆಯ್ಕೆಗೆ ಅವಕಾಶವಿರುವುದಿಲ್ಲ.

ಸ್ವಸಹಾಯ ಗುಂಪುಗಳಲ್ಲಿ ಉಳಿತಾಯ ಮಾಡಿದವರಿಗೆ ಸಾಲ ನೀಡುತ್ತೇವೆ ಎನ್ನುವ ಬ್ಯಾಂಕುಗಳ ನಿಲುವು ಒಂದರ್ಥದಲ್ಲಿ ಸರಿಯೆನಿಸಿದರೂ ಸಹ ಮತ್ತೊಂದು ಅರ್ಥದಲ್ಲಿ ಬೇರೆ ಬೇರೆ ಸಾಲ ವಹಿವಾಟುಗಳಲ್ಲಿ ಯಾವ ಉಳಿತಾಯವನ್ನು ಕೇಳದೆ ಸಾಲ ನೀಡುವ ಬ್ಯಾಂಕುಗಳು ಇಲ್ಲಿ ಮಾತ್ರ ಹೀಗೇಕೆ ತಾರತಮ್ಯ ಮಾಡುತ್ತಿವೆ ಎನಿಸದಿರುವುದಿಲ್ಲ. ಲಕ್ಷಾಂತರ ಹಣವನ್ನು ಮೋಸಗೊಳಿಸುವ ಕಾರ್ಖಾನೆಗಳಿಗೆ ಸುಲಭವಾಗಿ ಸಾಲ ನೀಡುವ ಬ್ಯಾಂಕುಗಳ ಕೇವಲ ೩,೦೦೦, ೫೦೦೦ ರೂ.ಗಳನ್ನು ಸಾಲ ನೀಡಲು ಉಳಿತಾಯದ ನಿರ್ಬಂಧ ಹೇರುವುದು ಸರಿಯೇ ಎಂಬ ಪ್ರಶ್ನೆ ಹುಟ್ಟುತ್ತದೆ.

ಒಂದು ವೇಳೆ ಉಳಿತಾಯ ಮಾಡಿದರೆ ಮಾತ್ರವೇ ಸಾಲ ನೀಡುವುದಾದರೆ ಬ್ಯಾಂಕುಗಳ ಒಟ್ಟು ಹಣಕಾಸಿನ ವಹಿವಾಟಿನಲ್ಲಿ ಮಹಿಳೆಯರ ಪಾಲು ಇದ್ದಂತೆಯೇ, ಹಾಗಾದರೆ ಮಹಿಳೆಯರನ್ನು ಏಕೆ ಬ್ಯಾಂಕಿನ ಪಾಲುದಾರರನ್ನಾಗಿ ನೋಡಬಾರದು ಅವರನ್ನು ಸಾಲಗಾರರನ್ನಾಗಿ ಮಾತ್ರವೇ ಏಕೆ ನೋಡುತ್ತಾರೆ

ಇಪ್ಪತ್ತೈದು ಲಕ್ಷಕ್ಕೂ ಹೆಚ್ಚು ಮಂದಿ ಹೆಂಗಸರು ಸ್ವಸಹಾಯ ಸಂಘಟನೆಯಲ್ಲಿ ಸದಸ್ಯೆಯಾಗಿ ತಮ್ಮ ಧ್ಯೇಯೋದ್ದೇಶಗಳನ್ನು ಈಡೇರಿಸಿಕೊಳ್ಳುತ್ತಿರುವುದು ಮೆಚ್ಚುಗೆಯಾದರೂ ರಾಜ್ಯದ ಶೇ. ೨೦ ರಷ್ಟು ಮಹಿಳೆಯರೂ ಈವರೆವಿಗೂ ಐದು ವರ್ಷ ಕಳೆದರೂ ಸ್ವಸಹಾಯ ಗುಂಪುಗಳ ಸದಸ್ಯೆಯರಾಗಿಲ್ಲ. ಅವರತ್ತ ಗಮನಹರಿಸಬೇಕಾದದ್ದು ತುರ್ತು ಸಂಗತಿ.

ಮಹಿಳೆಯರನ್ನು ಸಬಲಗೊಳಿಸಬೇಕು. ಅವರು ಮನೆಯಿಂದ ಹೊರ ರಬೇಕು. ಪುರುಷರಿಗೆ ಸಮಾನವಾಗಿ ಉತ್ಪಾದನೆಯಲ್ಲಿ ತೊಡಗಬೇಕು ಎಂಬುದು ಉತ್ತಮ ಬೆಳವಣಿಗೆ ಎನಿಸಿದರೂ ಹೆಣ್ಣು ಹೆಚ್ಚಿನ ಶ್ರಮಕ್ಕೆ ಇದರಿಂದ ಒಳಗಾಗುತ್ತಾಳೆ. ಅತ್ತ ಮನೆಯಲ್ಲಿಯೂ ಅಡಿಗೆ ಮನೆಗೆ, ಮಕ್ಕಳ, ಹಿರಿಯರ ಪಾಲನೆ ಇತ್ಯಾದಿ ದುಡಿಯಬೇಕು, ಹೊರ ಬಂದು ದುಡಿಯಬೇಕು ಎಂಬಂತಾಗುತ್ತದೆ. ಆದ್ದರಿಂದ ಪುರುಷರೂ ಮನೆಯಲ್ಲಿ ಹೆಂಗಸರ ಕೆಲಸವನ್ನು ಹಂಚಿಕೊಳ್ಳುವ, ಸಮಾನವಾಗಿ ಸ್ಪಂದಿಸುವ ಕಾರ್ಯ ನಡೆಯಬೇಕಾಗುತ್ತದೆ. ಸಶಕ್ತೀಕರಣದ ಹೆಸರಿನಲ್ಲಿ ಹೆಣ್ಣನ್ನು ಹೆಚ್ಚಿನ ದುಡಿಮೆಗೊಯ್ಯುವುದು ಯುಕ್ತವಾಗಲಾರದು. ಈ ಸಂಬಂಧದಲ್ಲಿ ಗಂಡಸರಿಗೆ ತರಬೇತಿ ನೀಡಬೇಕಾದ ಅವಶ್ಯಕತೆ ತುಂಬಾ ಇದೆ.

ಸ್ವಸಹಾಯ ಗುಂಪುಗಳನ್ನು ರಾಜಕಾರಣಿಗಳು ಮತ್ತು ಬ್ಯಾಂಕುಗಳಾಗಿ ಪರಿವರ್ತಿಸಿಕೊಳ್ಳುವ ಹುನ್ನಾರಗಳು ನಡೆಯುತ್ತಿವೆ. ಇದೂ ಆರೋಗ್ಯಕರವಾದದ್ದಲ್ಲ. ರಾಜಕೀಯ ಪ್ರವೇಶದಿಂದ ಗುಂಪಿನ ಧ್ಯೇಯೋದ್ದೇಶಗಳಿಗೆ ಭಂಗ ಬರುವ ಸಾಧ್ಯತೆಗಳಿವೆ. ಆದ್ದರಿಂದ ಇದರಿಂದ ದೂರವಿರಬೇಕಾಗಿದೆ.

ಕುಡಿಯುವುದೇ ಮದ್ಯಪಾನ ಸರ್ವ ಶ್ರೇಷ್ಠ ಎನ್ನುವ ಗಂಡಂದಿರಿಗೆ ಅವನ ಹೆಂಡತಿಯ ಉಳಿತಾಯದ ದುರುಪಯೋಗುವ ಸಾಧ್ಯತೆಗಿರುತ್ತವೆ. ಆದ್ದರಿಂದ ಸ್ವಾಭಿಮಾನದ ಸಚ್ಚಾರಿತ್ರದ ಬದುಕನ್ನು ಗಂಡಸಿಗೂ ಕಲಿಸುವುದು ಅನಿವಾರ್ಯವಾಗಿದೆ. ಅದು ನಡೆಯುತ್ತಿಲ್ಲ.

ಹೆಂಗಸರು ಉಳಿತಾಯ ಮಾಡಿದ್ದರಲ್ಲಿ ಅಥವಾ ಪಡೆದ ಸಾಲವನ್ನು ಬಂಡವಾಳ ಹೂಡಿಕೆಯಾಗಿ ಅಥವಾ ಅಭಿವೃದ್ಧಿಯ ಪ್ರಕ್ರಿಯೆಗೆ ತೊಡಗಿಸಲು ಯಾವ ಸಾಧನವೂ ಅವಳ ಹೆಸರಿನಲ್ಲಿ ಇರುವುದಿಲ್ಲ. ಆಸ್ತಿಯಾಗಲಿ, ಮನೆಯಾಗಲಿ, ಗಂಡನ ಒಡೆತನದಲ್ಲಿರುತ್ತದೆ ತನ್ನ ಗಳಿಕೆಯನ್ನು ತನ್ನ ಉದ್ದೇಶಕ್ಕೆ ಬಳಸಲು ಇದು ಅಡ್ಡಿಯಾಗುತ್ತದೆ. ಆದ್ದರಿಂದ ಸಮಾನ ಆಸ್ತಿಯ ಹಕ್ಕು ಇಬ್ಬರಿಗೂ ಇರಬೇಕು. ಸಮನ್ವಯತೆಯ ಕೊರತೆ ಇರುವ ಕುಟುಂಬಗಳು ಇಂತಲ್ಲಿ ಹಲವು ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದಗೆ.

ಸ್ವಸಹಾಯ ಗುಂಪುಗಳಿಗೆ ಸೂಕ್ತ ತರಬೇತಿಗಳಿಲ್ಲ. ಆದ್ದರಿಂದ ಪಡೆದ ಸಾಲದ ವಿನಿಯೋಗದಲ್ಲಿ ಎಡವುವ ಸಾಧ್ಯತೆಗಳಿರುತ್ತವೆ. ಹೆಂಗಸರಲ್ಲಿ ಇರುವ ಕೌಶಲ, ಆಸಕ್ತಿ ಮತ್ತು ಮುಂದಿನ ಆಯ್ಕೆಯನ್ನು ಅನುಸರಿಸಿ ಸ್ಥಳೀಯ ಸಂಪನ್ಮೂಲಗಳನ್ನು ಆಧರಿಸಿ ತರಬೇತಿ ನೀಡಬೇಕಾದದ್ದು ಅನಿವಾರ್ಯವಾಗಿರುತ್ತದೆ.

ಗ್ರಾಮಗಳ ಸ್ವಾವಲಂಬನೆಗಾಗಿ ಆಯಾಯ ಗ್ರಾಮದ ಶಾಲೆ, ಆಸ್ಪತ್ರೆ, ಚರಂಡಿ, ಗೋಮಾಳ, ನೆಡುತೋಪು, ಕೆರೆ, ಕಟ್ಟೆ, ಬಾವಿ, ಅರಳಿಕಟ್ಟೆ, ಕುಡಿಯುವ ನೀರು ಇತ್ಯಾದಿಗಳ ರಕ್ಷಣೆ ಮತ್ತು ಅಭಿವೃದ್ಧಿಯ ಕಾರ್ಯವನ್ನು ಹೆಂಗಸರೇ ನಿರ್ವಹಿಸುವಂತಾಗಬೇಕು. ಆದ್ದರಿಂದ ಈಗಿನ ಶೇ. ೨೨ರ ಪ್ರಮಾಣದಲ್ಲಿ ಮೀಸಲಾತಿ ನೀಡುವ ಬದಲು (ಹತ್ತು ಜನರಲ್ಲಿ ಮೂರು ಮಂದಿ ಏನು ತಾನೇ ಮಾಡುತ್ತಾರೆ?) ಗ್ರಾಮ ಪಂಚಾಯಿತಿ ಸದಸ್ಯರೆಲ್ಲರೂ ಒಂದೆರಡು ಅವಧಿಗಾದರೂ ಮಹಿಳೆಯರೇ ಆಗಿ ಕಾರ್ಯ ನಿರ್ವಹಿಸಿದರೆ ಬಹುಶಃ ಇಂದಿನಕ್ಕಿಂತ ಹೆಚ್ಚು ಸುಧಾರಣೆಯಾಗಬಹುದು. ಅಂಥ ಅವಕಾಶ ಕಲ್ಪಿಸಿ ಕೊಟ್ಟು ಸ್ವಸಹಾಯ ಸಂಘಟನೆಯನ್ನು ಸಾಮುದಾಯಿಕ ಅಭಿವೃದ್ಧಿಯತ್ತ ಕೊಂಡೊಯ್ಯಬೇಕು.

ಉಳಿತಾಯ ಉತ್ಪಾದಕತೆಗೆ ನೆರವಾಗದಿದ್ದರೆ ಉಳಿತಾಯವೂ ಚಲನೆಯನ್ನು ಕಳೆದುಕೊಳ್ಳುತ್ತದೆ. ಆದ್ದರಿಂದ ಉಳಿತಾಯದ ಉಪಯೋಗದ ಮಾದರಿಗಳನ್ನು ಸ್ವಸಹಾಯ ಗುಂಪುಗಳ ಸದಸ್ಯರಿಗೆ ಒದಗಿಸಬೇಕು.

ಸ್ವಸಹಾಯ ಸಂಘಟನೆಯ ರಚನೆಗೆ ನೆರವಾದ ಅಂಗನವಾಡಿ ಕಾರ್ಯಕರ್ತೆಯರು ಗುಂಪಿನ ಸದಸ್ಯರಲ್ಲಿ ಸಾಲವನ್ನು ಗುಂಪಿನ ಸದಸ್ಯರಿಗೆ ಮಾತ್ರವೇ ನೀಡಬೇಕೆಂಬ ನಿಯಮವಿದ್ದರೂ ಈ ಕಾರ್ಯಕರ್ತೆಯರೂ ಸಾಲ ಪಡೆದು ಹಿಂದಿರುಗಿಸದೇ ಇರುವುದು ಕಂಡುಬರುತ್ತಿದೆ. ಇದೂ ಸಹ ಒಂದು ರೀತಿಯ ಅವ್ಯವಹಾರವಾಗುತ್ತದೆ.

ಇಷ್ಟೆಲ್ಲ ಇತಿಮಿತಿಗಳ ನಡುವೆಯೂ ಸ್ತ್ರೀಯರಲ್ಲಿ ಜಾಗೃತಿ ಮೂಡಿಸಿ ಮಾನವ ಸಂಪನ್ಮೂಲದ ಬೆಳವಣಿಗೆಗೆ ಕಾರಣವಾಗಿರುವ ಸ್ತ್ರೀ ಶಕ್ತಿ ಯೋಜನೆ ಹಲವು ಕಾರಣಗಳಿಂದ ಮುಖ್ಯವೆನಿಸುತ್ತದೆ ಮತ್ತು ಅಗತ್ಯವೆನಿಸುತ್ತದೆ.

## ೪.೨. ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳು

೧. ಅಂಗನವಾಡಿ ಕಾರ್ಯಕರ್ತೆಯರಿಗೆ ಕೆಲಸದ ಜವಾಬ್ದಾರಿ ಮತ್ತು ಒತ್ತಡ ಹೆಚ್ಚಾಗಿದೆ. ಇವರು ಸುಮಾರು ೨೬ ವಿವಿಧ ಮಾಹಿತಿಯುಳ್ಳ ದಾಖಲೆಗಳನ್ನು ನಿರ್ವಹಿಸುತ್ತಿರುವುದು, ಜೊತೆಗೆ ಕಾಲಕಾಲಕ್ಕೆ ಬರುವ ಜನಗಣತಿ, ಮಸ್ಕಿಟೋ ಸರ್ವೆ, ಚಿಕೂನ್‌ಗುನ್ಯಾ ಸರ್ವೆ ಮತ್ತಿತರ ಹೆಚ್ಚಿನ ಕೆಲಸದ ಹೊರೆ ಅವರ ಮೇಲಿದೆ. ಇವರಿಂದ ಅವರಿಗೆ ನಿಗದಿತ ಕೆಲಸ ಅನ್ನುವುದೇ ಇಲ್ಲ.

೨. ಬಹುತೇಕ ಗ್ರಾಮ ಪಂಚಾಯ್ತಿಗಳು ಅಂಗನವಾಡಿ ಕೇಂದ್ರಗಳನ್ನು ನಮ್ಮವು, ಇವುಗಳ ಜವಾಬ್ದಾರಿ ನಮ್ಮದು ಎನ್ನುವ ಭಾವನೆಯನ್ನು ಹೊಂದಿಲ್ಲ. ಈ ಕೇಂದ್ರಗಳಿಗೆ ಅನೇಕ ಕಡೆ ಪ್ರೋತ್ಸಾಹ ಕೂಡ ದೊರೆಯುತ್ತಿಲ್ಲ.

೩. ಅಂಗನವಾಡಿ ಕಾರ್ಯಕರ್ತೆಯರ ಹುದ್ದೆ ಖಾಯಂ ಆಗಿರುವುದಿಲ್ಲ.

೪. ಅಂಗನವಾಡಿ ಕಟ್ಟಡಗಳಿಗೆ ಒಂದು ನಿರ್ದಿಷ್ಟ ವಿನ್ಯಾಸವಿಲ್ಲ ಮತ್ತು ಸ್ವಂತ ಕಟ್ಟಡಗಳು ಕೂಡ ಅತ್ಯಂತ ಕಡಿಮೆ ಪ್ರಮಾಣದಲ್ಲಿವೆ. ಅಂಗನವಾಡಿ ಕೇಂದ್ರಗಳಲ್ಲಿ ಎಲ್ಲ ಬಗೆಯ ಸೌಲಭ್ಯಗಳು ಉದಾಹರಣೆಗೆ ಶೌಚಾಲಯ, ಕುಡಿಯುವ ನೀರು, ಆಟದ ಸಾಮಗ್ರಿಗಳು ಪ್ರಥಮ ಚಿಕಿತ್ಸೆಯ ಕಿಟ್ಟು, ತೂಕದ ಯಂತ್ರ ಮುಂತಾದವು ವ್ಯವಸ್ಥಿತ ರೀತಿಯಲ್ಲಿ ಇರುವುದಿಲ್ಲ.

೫. ಅಂಗನವಾಡಿ ಕಾರ್ಯಕರ್ತೆಯ ಗೌರವಧನ ಕಡಿಮೆ ಇದೆ.

## ೪.೩. ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳು - ಪರಿಹಾರೋಪಾಯಗಳು

೧. ಅಂಗನವಾಡಿ ಕಾರ್ಯಕರ್ತೆಯರಿಗೆ ಕೆಲಸದ ಜವಾಬ್ದಾರಿ ಮತ್ತು ಒತ್ತಡ ಕಡಿಮೆ ಮಾಡಬೇಕು. ಅವರು ಸುಮಾರು ೨೬ ವಿವಿಧ ಮಾಹಿತಿಯುಳ್ಳ ದಾಖಲೆಗಳನ್ನು ನಿರ್ವಹಿಸುವುದು ತುಂಬಾ ಕಷ್ಟದ ಕೆಲಸವಾಗಿದೆ. ಅಂಗನವಾಡಿ ಕಾರ್ಯಕರ್ತೆಗೆ ತನ್ನದೇ ಆದ ಕೆಲಸ ಕಾರ್ಯಕ್ಕೆ ಸಮಯ ಇರುವುದಿಲ್ಲ. ಕಾಲಕಾಲಕ್ಕೆ ಬರುವ ಜನಗಣತಿ, ಮಸ್ಕಿಟೋ ಸರ್ವೆ, ಚಿಕೂನ್‌ಗುನ್ಯಾ ಸರ್ವೆ ಮುಂತಾದ ಕೆಲಸಗಳನ್ನು ಅವಳ ಮೇಲೆ ಹೇರಕೂಡದು.

೨. ಬಹುತೇಕ ಗ್ರಾಮ ಪಂಚಾಯಿತಿಗಳು ಅಂಗನವಾಡಿ ಕೇಂದ್ರಗಳನ್ನು ನಮ್ಮವು ಎಂಬ ಭಾವನೆ ತೋರಿಸಬೇಕು. ಜವಾಬ್ದಾರಿ ನಮ್ಮವು ಎನ್ನುವ ಭಾವನೆ ಮೂಡಿಸಬೇಕು. ಗ್ರಾಮ ಪಂಚಾಯಿತಿಯಿಂದ ಪ್ರೋತ್ಸಾಹ ಧನವನ್ನು ನೀಡಬೇಕು.

೩. ಕೇಂದ್ರ ಸರಕಾರವು ಅಂಗನವಾಡಿ ಕಾರ್ಯಕರ್ತೆಯ ಹುದ್ದೆಯನ್ನು ಖಾಯಂಗೊಳಿಸಬೇಕು.

೪. ಕೇಂದ್ರ ಸರಕಾರವು ಅಂಗನವಾಡಿ ಕಟ್ಟಡಗಳಿಗೆ ಒಂದು ನಿರ್ದಿಷ್ಟ ವಿನ್ಯಾಸವನ್ನು ರೂಪಿಸಬೇಕು. ಮತ್ತು ಸ್ವಂತ ಕಟ್ಟಡಗಳ ನಿರ್ಮಾಣ ಮಾಡಬೇಕು. ಅಂಗನವಾಡಿ ಕೇಂದ್ರಗಳಲ್ಲಿ ಎಲ್ಲ ಬಗೆಯ ಮೂಲ ಸೌಕರ್ಯಗಳನ್ನು ನೀಡಬೇಕು.

ಉದಾಹರಣೆಗೆ: ಶೌಚಾಲಯ, ಕುಡಿಯುವ ನೀರು, ಆಟದ ಸಾಮಗ್ರಿಗಳು, ಪ್ರಥಮ ಚಿಕಿತ್ಸೆಯ ಕಿಟ್ಟು, ತೂಕದ ಯಂತ್ರ ಮುಂತಾದವು.

೫. ಅಂಗನವಾಡಿ ಕಾರ್ಯಕರ್ತೆಯರ ಗೌರವಧನ ಹೆಚ್ಚಿಸಬೇಕು.

## ೪.೪. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಯಲ್ಲಿ ಸರಕಾರದ ಯೋಜನೆಗಳು

ಕರ್ನಾಟಕ ಸರ್ಕಾರವು ಮಹಿಳೆಯರ ಅಭ್ಯುದಯಕ್ಕಾಗಿ ಮತ್ತು ಶೋಷಣೆಯನ್ನು ತಡೆಗಟ್ಟಲು ಹಲವಾರು ಯೋಜನೆಗಳನ್ನು ಕಾರ್ಯಗತಗೊಳಿಸಿದೆ. ಸರ್ಕಾರದ ಪ್ರಧಾನ ಸಂಘಟನೆ ಇದಾಗಿದ್ದು ಮಹಿಳೆಯರ ಸಬಲೀಕರಣ ಮತ್ತು ಶ್ರೇಯೋಭಿವೃದ್ಧಿಗಾಗಿ ಶ್ರಮಿಸುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಆದ್ದರಿಂದ ಮಹಿಳೆಯರ ಅಭಿವೃದ್ಧಿಯಲ್ಲಿ ಸರ್ಕಾರವೂ ಕೈ ಜೋಡಿಸಿದೆ ಮತ್ತು ದೃಢಸಂಕಲ್ಪದಿಂದ ಕಾಯೋನ್ಮುಖವಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮಹಿಳಾ ಕಾರ್ಯಕ್ರಮಗಳನ್ನು ವಿವರಣೆಯನ್ನು  ನೀಡಲಾಗಿದೆ.

ಮಹಿಳಾಭ್ಯುದಯದ ಯೋಜನೆಗಳನ್ನು ಮೂರು ವಿಧಗಳಲ್ಲಿ ನೋಡಬಹುದಾಗಿದೆ.

೧. ರಾಜ್ಯ ವಲಯ ಯೋಜನೆಗಳು

೨. ಜಿಲ್ಲಾ ವಲಯ ಯೋಜನೆಗಳು

೩. ಕೇಂದ್ರ ಸರ್ಕಾರದ ಅನುದಾನಿತ ಯೋಜನೆಗಳು

### ರಾಜ್ಯವಲಯದ ಯೋಜನೆಗಳು

### ಸ್ತ್ರೀ ಶಕ್ತಿ

ಗ್ರಾಮೀಣ ಮಹಿಳೆಯರ ಸಬಲೀಕರಣ ಹಾಗೂ ಸ್ವಾವಲಂಬಿಗಳಾಗಿಸುವುದನ್ನು ಮುಖ್ಯ ಗುರಿಯನ್ನಾಗಿಸಿಕೊಂಡಿರುವ ಸ್ತ್ರೀ ಶಕ್ತಿ ಯೋಜನೆಯನ್ನು ೧೮.೧೦.೨೦೦೦ದಂದು ರಾಜ್ಯ ಸರ್ಕಾರ ಅನುಷ್ಠಾನಗೊಳಿಸಿದೆ. ಗ್ರಾಮೀಣ ಪ್ರದೇಶದಲ್ಲಿ ಒಂದು ಲಕ್ಷಕ್ಕೂ ಮೀರಿ ಸ್ವಸಹಾಯ ಗುಂಪುಗಳನ್ನು ೨೭ ಜಿಲ್ಲೆಯ ೪೦.೩೦೧ ಅಂಗನವಾಡಿ ಕೇಂದ್ರಗಳ ಮೂಲಕ ರಚಿಸಲಾಗಿದೆ.

### ಸಾಂತ್ವನ

ದೌರ್ಜನ್ಯ ಹಾಗೂ ಅತ್ಯಾಚಾರಕ್ಕೆ ಒಳಪಟ್ಟ ಮಹಿಳೆಯರಿಗೆ ಆಶ್ರಯ, ಆರ್ಥಿಕ ಹಾಗೂ ಕಾನೂನು ನೆರವು ನೀಡುವುದು ಮತ್ತು ಸ್ವಂತ ಉದ್ಯೋಗ ಮಾಡಲು ಅನುಕೂಲವಾಗುವಂತೆ ತರಬೇತಿ ನೀಡಿ ಮಹಿಳೆಯರು ಸ್ವಾವಲಂಬಿಗಳಾಗಲು ನೆರವಾಗುವುದು ಇದರ ಉದ್ದೇಶವಾಗಿದೆ. ತೊಂದರೆಗೊಳಗಾದ ಮಹಿಳೆಯರ ಉಚಿತ ದೂರವಾಣಿ ಸಂಖ್ಯೆ ೧೯೯೧.

### ಗ್ರಾಮಾಂತರ ಪ್ರದೇಶದ ಬಾಲಕಿಯರಿಗೆ ವಸತಿ ನಿಲಯವನ್ನು ನಡೆಸಲು ಆರ್ಥಿಕ ನೆರವು

ಗ್ರಾಮಾಂತರ ಪ್ರದೇಶದ ಹೆಣ್ಣು ಮಕ್ಕಳ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು ಹಾಗೂ ಶಾಲೆ ಬಿಡುವುದನ್ನು ತಪ್ಪಿಸಲು ಅನುಕೂಲವಾಗುವಂತೆ ವಸತಿ ನಿಲಯಗಳನ್ನು ಇಲಾಖಾವತಿಯಿಂದ ಹಾಗೂ ಸ್ವಯಂಸೇವಾ ಸಂಸ್ಥೆಗಳಿಂದ ನಡೆಸಲಾಗುತ್ತದೆ. ಕರ್ನಾಟಕ ರಾಜ್ಯದಲ್ಲಿ ೨೪ ಹೆಣ್ಣು ಮಕ್ಕಳ ವಸತಿ ನಿಲಯಗಳಿವೆ.

**ಮಹಿಳಾ ಕಾನೂನು ಪದವೀಧರರಿಗೆ ಸಹಾಯಧನ**

ಕಾನೂನು ಪದವಿ ಪಡೆದಿರುವ ಮಹಿಳೆಯರಿಗೆ ಕಾನೂನು ಆಡಳಿತದಲ್ಲಿ ತರಬೇತಿ ಪಡೆಯಲು ವಾರ್ಷಿಕ ೪೦,೦೦೦ ರೂಗಳಿಗಿಂತ ಕಡಿಮೆ ಆದಾಯವಿರುವ ೩೫ ವರ್ಷ ವಯೋಮಿತಿಯೊಳಗಿರುವ ಮತ್ತು ಬಾರ್ ಕೌನ್ಸಿಲ್‌ನಲ್ಲಿ ನೋಂದಾಯಿಸಿ ಹಿರಿಯ ವಕೀಲರ ಅಧೀನದಲ್ಲಿ ತರಬೇತಿ ಪಡೆಯುತ್ತಿರುವ ಕಾನೂನು ಪದವೀಧರರಿಗೆ ಮಾಸಿಕ ೧೦೦೦ ರೂ. ಆರ್ಥಿಕ ಸಹಾಯ ಮತ್ತಿತರ ಸೌಲಭ್ಯಗಳನ್ನು ನೀಡಲಾಗಿದೆ.

**ವೃತ್ತಿ ತರಬೇತಿ ಪಡೆಯುವ ಮಹಿಳೆಯರಿಗೆ ಆರ್ಥಿಕ ಸಹಾಯ**

ಟಿ.ವಿ., ರೇಡಿಯೋ, ಗಡಿಯಾರ ರಿಪೇರಿ, ಬೆರಳಚ್ಚು ಶೀಘ್ರಲಿಪಿ ತರಬೇತಿ, ಮೋಟಾರ್ ರಿವೈಂಡಿಂಗ್ ಇತ್ಯಾದಿಗಳಲ್ಲಿ ತರಬೇತಿ ಪಡೆಯಲು ಆರ್ಥಿಕ ಸಹಾಯ ನೀಡಲಾಗುವುದು.

**ವಿಧವಾ ವೇತನ**

ಯಾವುದೇ ರೀತಿಯ ಜೀವನಾಧಾರವೂ ಇಲ್ಲದ ನಿರ್ಗತಿಕ ವಿಧವೆಯರಿಗೆ ಹಣಕಾಸು ನೆರವು ನೀಡುವ ಮೂಲಕ ಸಾಮಾಜಿಕ ಭದ್ರತೆಯನ್ನು ಒದಗಿಸುವುದು ಇದರ ಉದ್ದೇಶ. ಪ್ರತಿ ಮಾಹೆ ೧೦೦ ರೂ.ಗಳನ್ನು ನಿರ್ಗತಿಕ ವಿಧವೆಯರಿಗೆ ನೀಡಲಾಗುತ್ತಿದೆ.

**ಕರ್ನಾಟಕ ಮಹಿಳಾ ಅಭಿವೃದ್ಧಿ ಯೋಜನೆ**

ಲಿಂಗತ್ವ ಸಮಾನತೆಯನ್ನು ಖಚಿತಪಡಿಸಲು ಮತ್ತು ಮಹಿಳೆಯರನ್ನು ಅಭಿವೃದ್ಧಿಯ ಮುಖ್ಯವಾಹಿನಿಯಲ್ಲಿ ತರಲು ಕರ್ನಾಟಕ ಮಹಿಳಾ ಅಭಿವೃದ್ಧಿ ಯೋಜನೆಯನ್ನು ೧೯೯೫-೯೬ರಿಂದ ಜಾರಿಗೊಳಿಸಲಾಗಿದೆ. ಲಿಂಗತ್ವಕ್ಕೆ ಸಂಬಂಧಪಟ್ಟ ವಿಷಯಗಳನ್ನು ಬಗೆಹರಿಸಲು ಸರ್ಕಾರವು ಅಧಿಕೃತವಾಗಿ ಕೈಗೊಂಡ ಸಕಾರಾತ್ಮಕ ಪ್ರಯತ್ನಗಳಲ್ಲಿ ಇದು ಮುಖ್ಯವಾದದ್ದು. ಸರ್ಕಾರದ ವಿವಿಧ ಇಲಾಖೆಗಳ ಎಲ್ಲ ಫಲಾನುಭವಿ ಆಧಾರಿತ ಮತ್ತು ಹೆಚ್ಚು ಕಾರ್ಮಿಕರನ್ನು ಹೊಂದಿರುವ ಕಾರ್ಯಕ್ರಮಗಳಿಗೆ ಒದಗಿಸುವ ಸಂಪನ್ಮೂಲಗಳ ಮೂರನೇ ಒಂದು ಭಾಗವನ್ನು ಮಹಿಳೆಯರಿಗೆ ಮೀಸಲಿಡುವುದೇ ಯೋಜನೆಯ ಕಾರ್ಯತಂತ್ರವಾಗಿದೆ. ಇದರ ಅನುಷ್ಠಾನದಲ್ಲಿ ಕರ್ನಾಟಕವು ಭಾರತ ದೇಶದಲ್ಲಿ ಮೊದಲ ರಾಜ್ಯವಾಗಿರುತ್ತದೆ.

**ಮಹಿಳೆಯರಿಗೆ ಉದ್ಯೋಗದಲ್ಲಿ ಶೇ. ೩೦ರಷ್ಟು ಮೀಸಲಾತಿ**

ಸರ್ಕಾರವು ನೇರ ನೇಮಕಾತಿಯಲ್ಲಿ ಶೇ. ೩೦ರಷ್ಟು ಹುದ್ದೆಯನ್ನು ಮೀಸಲಾತಿಯಿದ್ದ ಆದೇಶ ಹೊರಡಿಸಿರುತ್ತದೆ. ೯೬ ಇಲಾಖೆಗಳ ೭೬ ನಿಗಮ, ಮಂಡಳಿಗಳು ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಇದುವರೆಗೆ ೨೦, ೧೩೪ ಮಹಿಳೆಯರನ್ನು ಈ ಮೀಸಲಾತಿಯಡಿಯಲ್ಲಿ ನೇಮಕ ಮಾಡಲಾಗಿದೆ.

**ಸಾಮಾಜಿಕ ಪಿಡುಗಳ ನಿವಾರಣೆಗೆ ವಿಶೇಷ ಘಟಕ**

ಸಾಮಾಜಿಕ ಪಿಡುಗುಗಳಾದ ವರದಕ್ಷಿಣೆ, ದೇವದಾಸಿ ಪದ್ಧತಿ, ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯ ಮುಂತಾದವುಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸುವುದು. ವರದಕ್ಷಿಣೆ ನಿಷೇಧ ಅಧಿನಿಯಮ

೧೯೬೧, ದೇವದಾಸಿ (ಸಮರ್ಪಣಾ ನಿಷೇಧ) ಅಧಿನಿಯಮ ೧೯೮೨, ಬಾಲ್ಯ ವಿವಾಹ (ನಿಷೇಧ) ಅಧಿನಿಯಮ ೧೯೨೯ ಇವುಗಳ ಬಗ್ಗೆ ಮತ್ತು ಸಂದರ್ಭದಲ್ಲಿ ರೂಢಿಯಲ್ಲಿರುವ ಇತರೆ ಸಾಮಾಜಿಕ ಪಿಡುಗುಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ಜಿಲ್ಲೆಗಳಲ್ಲಿ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

**ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ**

ಮಹಿಳಾ ಅಭಿವೃದ್ಧಿ ಕ್ಷೇತ್ರದಲ್ಲಿ ಸಾಮಾಜಿಕವಾಗಿ ಹಾಗೂ ಇತರೆ ತೊಂದರೆಗಳಲ್ಲಿರುವ ಮಹಿಳೆಯರಿಗೆ ರಕ್ಷಣೆ ನೀಡಿ ಆರ್ಥಿಕವಾಗಿ ಸಬಲರನ್ನಾಗಿಸಲು ಪುನರ್ವಸತಿ ಕಾರ್ಯದಲ್ಲಿ ತೊಡಗಿಸುವ ಮಹಿಳೆಯರ ಪ್ರಯತ್ನವನ್ನು ಗುರುತಿಸಿ, ಉತ್ತಮ ಸೇವೆ ಸಲ್ಲಿಸುತ್ತಿರುವ ಸ್ವಯಂ ಸೇವಾಸಂಸ್ಥೆ ಹಾಗೂ ವ್ಯಕ್ತಿಗಳನ್ನು ಪ್ರೋತ್ಸಾಹಿಸುವ ಸಲುವಾಗಿ ಕಳೆದ ದಶಕದಿಂದ ರಾಜ್ಯ ಸರ್ಕಾರವು ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿಯನ್ನು ಪ್ರತಿ ವರ್ಷ ಮಾರ್ಚ್ ಎಂಟರಂದು ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ನೀಡುತ್ತಿದೆ. ಉತ್ತಮ ಸಂಸ್ಥೆಗೆ ೨೫,೦೦೦/- ರೂಪಾಯಿಗಳು ಹಾಗೂ ವ್ಯಕ್ತಿಗೆ ೧೦,೦೦೦/- ರೂಪಾಯಿಗಳ ಪ್ರಶಸ್ತಿಯನ್ನು ನೀಡಲಾಗುತ್ತದೆ. ವೈಯಕ್ತಿಕವಾಗಿ ನೀಡುವ ಪ್ರಶಸ್ತಿಯನ್ನು ಕಲೆ, ಸಾಹಿತ್ಯ, ಶಿಕ್ಷಣ, ಕ್ರೀಡಾ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹಿಳೆಯರಿಗೂ ವಿಸ್ತರಿಸಿದೆ. ಆಪತ್ಕಾಲದಲ್ಲಿರುವ ವ್ಯಕ್ತಿಗಳನ್ನು ರಕ್ಷಿಸುವ ಸಲುವಾಗಿ ಸಮಯಪ್ರಜ್ಞೆಯಿಂದ ಹೋರಾಡಿದ ಮಹಿಳೆಯರಿಗೆ 'ವೀರ ಮಹಿಳೆ' ಪ್ರಶಸ್ತಿಯನ್ನು ನೀಡಲಾಗುತ್ತಿದೆ.

**'ಭಾಗ್ಯಲಕ್ಷ್ಮಿ' ಯೋಜನೆ**

ಸಮಾಜದಲ್ಲಿ ಹೆಣ್ಣು ಮಕ್ಕಳ ಸ್ಥಿತಿಯನ್ನು ಉತ್ತಮಗೊಳಿಸಲು ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಹೆಣ್ಣು ಮಗು ಜನಿಸಿದಾಗ ಅಂಥ ಕುಟುಂಬಗಳಿಗೆ ನೈತಿಕ ಸ್ಥೈರ್ಯ ತುಂಬಲು ೨೦೦೬-೦೭ನೇ ಸಾಲಿನಿಂದ ಭಾಗ್ಯಲಕ್ಷ್ಮಿ ಯೋಜನೆಯನ್ನು ಜಾರಿಗೊಳಿಸಿದೆ.

ಭಾಗ್ಯಲಕ್ಷ್ಮಿ ಯೋಜನೆಯು ರಾಜ್ಯ ಪುರಸ್ಕೃತ ಯೋಜನೆಯಾಗಿದೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಲ್ಲಿ ಜನಿಸಿದ ಎರಡು ಹೆಣ್ಣು ಮಕ್ಕಳಿಗೆ ೧೦,೦೦೦/- ರೂಪಾಯಿಗಳ ಠೇವಣಿಯಿಟ್ಟು ಸೌಲಭ್ಯಾಧಾರಗಳಿಗೆ ೧೮ ವರ್ಷ ವಯಸ್ಸು ದಾಟಿದ ನಂತರ ನಗದು ಹಣ ಬಡ್ಡಿ ಸಮೇತ ಸದರಿಯವರಿಗೆ ತಲುಪಿಸುವುದಾಗಿದೆ.

**ಕೆಳದಿ ಚೆನ್ನಮ್ಮ ಪ್ರಶಸ್ತಿ**

೨೦೦೬-೦೭ ಸಾಲಿನಿಂದ ಸರ್ಕಾರವು ೬-೧೫ ವರ್ಷ ವಯೋಮಿತಿಯೊಳಗಿನ ಅಪ್ರತಿಮ ಧೈರ್ಯ, ಶೌರ್ಯ ಪ್ರದರ್ಶಿಸಿ ಇತರರ ಜೀವ ರಕ್ಷಣೆ ಮಾಡಿದ ಬಾಲಕಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

ಈ ಪ್ರಶಸ್ತಿಯು ೧೦,೦೦೦/- ರೂ ಗಳನ್ನು ಪಾವತಿಸುವುದಲ್ಲದೆ ಶಾಲಾ ಶಿಕ್ಷಣ ಪೂರೈಸುವವರೆಗೆ ೨೦೦೦/- ರೂ.ಗಳ ವಿದ್ಯಾರ್ಥಿ ವೇತನ ನೀಡಲಾಗುವುದು.

**ಸಂಕಷ್ಟ ಪರಿಸ್ಥಿತಿಯಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಆರ್ಥಿಕ ನೆರವು**

ಕಾರಾಗೃಹವಾಸಿಗಳ, ವೇಶ್ಯಾವೃತ್ತಿಯಲ್ಲಿದ್ದವರ, ಮಾಜಿ ದೇವದಾಸಿಯರ ಹಾಗೂ ಶೋಷಣೆಗೆ ಒಳಗಾದ ಮಹಿಳೆಯರ ಮಕ್ಕಳಲ್ಲಿ ೧೮ ವರ್ಷದೊಳಗಿನ ಗಂಡು ಮಕ್ಕಳು ಮತ್ತು ೨೦ ವರ್ಷದ ಹೆಣ್ಣು ಮಕ್ಕಳು ಅರ್ಹರಾಗಿರುತ್ತಾರೆ.

**ಮಾಸಿಕ ಆರ್ಥಿಕ ಸಹಾಯದ ವಿವರಗಳು**

೧. ೧ನೇ ತರಗತಿಯಿಂದ ೨ನೇ ತರಗತಿವರೆಗೆ ೫೦ ರೂ.

೨. ೩ನೇ ತರಗತಿಯಿಂದ ೪ನೇ ತರಗತಿಯವರೆಗೆ ೭೫ ರೂ.

೩. ೫ನೇ ತರಗತಿಯಿಂದ ೭ನೇ ತರಗತಿಯವರೆಗೆ ೧೦೦ ರೂ

೪. ೮ನೇ ತರಗತಿಯಿಂದ ೧೦ನೇ ತರಗತಿವರೆಗೆ ೧೫೦ ರೂ

೫. ಪಿ.ಯು.ಸಿ.ಯಿಂದ ಪದವಿ ಶಿಕ್ಷಣದವರೆಗೆ ೩೦೦ ರೂ.

**ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರಿಗೆ ಮರಣ ಪರಿಹಾರ ಹಾಗೂ ತೀವ್ರತರ ಕಾಯಿಲೆಗಳಿಗೆ ನೀಡುವ ಆರ್ಥಿಕ ನೆರವು.**

ರಾಜ್ಯದ ಅಂಗನವಾಡಿ ಕೇಂದ್ರಗಳಲ್ಲಿ ಗೌರವಧನದ ಆಧಾರದ ಮೇಲೆ ಸೇವೆ ಸಲ್ಲಿಸುತ್ತಿರುವ ಕಾರ್ಯಕರ್ತೆ/ಸಹಾಯಕಿಯರು ಬಡಕುಟುಂಬದವರಾಗಿದ್ದು ಅವರ ಕುಟುಂಬವು ಗೌರವಧನದ ಮೇಲೆ ಅವಲಂಬಿತರಾಗಿದ್ದಾರೆ. ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರು ಮರಣ ಹೊಂದಿದಾಗ ಅವರ ಕುಟುಂಬಕ್ಕೆ ಮಾನವೀಯತೆ ದೃಷ್ಟಿಯಿಂದ ಕಾರ್ಯಕರ್ತೆಯರಿಗೆ ೨೦,೦೦೦/- ರೂ. ಸಹಾಯಕಿಯರಿಗೆ, ೧೦೦೦೦/- ರೂ. ಮರಣ ಪರಿಹಾರ ನೀಡಲಾಗುವುದು. ತೀವ್ರತರವಾದ ಕಾಯಿಲೆಗಳಿಂದ ಹೃದ್ರೋಗ ಶಸ್ತ್ರ ಚಿಕಿತ್ಸೆ/ಕ್ಯಾನ್ಸರ್/ಡಯಾಲಿಸಿಸ್ / ಮೂತ್ರಪಿಂಡ ಜೋಡಣೆ ಇವುಗಳಿಗೆ ತುತ್ತಾದಲ್ಲಿ ಕಾರ್ಯಕರ್ತೆಯರಿಗೆ ೨೦,೦೦೦/- ರೂ. ಸಹಾಯಕಿಯರಿಗೆ ೧೦,೦೦೦/- ರೂಪಾಯಿಗಳ ಆರ್ಥಿಕ ನೆರವು ನೀಡಲಾಗುತ್ತದೆ.

**ಜಿಲ್ಲಾವಲಯ ಯೋಜನೆಗಳು**

**ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮ**

ಆರು ವರ್ಷದೊಳಗಿನ ಮಕ್ಕಳ ಗರ್ಭಿಣಿ ಮತ್ತು ಬಾಣಂತಿಯರ ಅಪೌಷ್ಟಿಕತೆಯನ್ನು ಹೋಗಲಾಡಿಸುವುದು ಇದರ ಉದ್ದೇಶ. ಇವರು ನಿತ್ಯ ಸೇವಿಸುತ್ತಿರುವ ಆಹಾರದಲ್ಲಿ ಸಿಗುವ ಕ್ಯಾಲೊರಿ, ಪ್ರೋಟಿನ್, ವಿಟಮಿನ್, ಖನಿಜಾಂಶಗಳ ಕೊರತೆ ಹಾಗೂ ಅವರಿಗೆ ಅವಶ್ಯವಿರುವ ಪ್ರಮಾಣಗಳ ನಡುವೆ ಇರುವ ವ್ಯತ್ಯಾಸವನ್ನು ಸರಿದೂಗಿಸಲು ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮದಡಿ ಅಂಗನವಾಡಿಗಳ ಮೂಲಕ ಪೌಷ್ಟಿಕ ಆಹಾರವನ್ನು ಒದಗಿಸಲಾಗುತ್ತದೆ.

ಪ್ರತಿದಿನ ಮೂರು ರೂ. ಮೌಲ್ಯದ ಆಹಾರ ನೀಡುವುದು. ಅಕ್ಕಿ, ಹೆಸರುಕಾಳು ಹಾಗೂ ಶಕ್ತಿಯುತ ಆಹಾರವನ್ನು ವಾರಕ್ಕೆ ಒಂದು ಬಾರಿ ವಿತರಿಸಿ ಮನೆಗೆ ತೆಗೆದುಕೊಂಡು ಹೋಗಲು ನೀಡಲಾಗುತ್ತವೆ.

**ಹಾಜರಾತಿ ಶಿಷ್ಯವೇತನ**

ಗ್ರಾಮಾಂತರ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳು ಶಾಲೆಯನ್ನು ಬಿಡುವುದನ್ನು ತಪ್ಪಿಸುವುದು ಹಾಗೂ ಹೆಣ್ಣು ಮಕ್ಕಳ ಸಾಕ್ಷರತೆಯನ್ನು ಹೆಚ್ಚಿಸಲು ಮೊದಲನೇ ಪ್ರಯತ್ನದಲ್ಲಿ ಉತ್ತೀರ್ಣರಾಗಿ ಶೇ. ೮೦ರಷ್ಟು ಹಾಜರಾತಿ ಪಡೆದಿರುವ ೫ರಿಂದ ೧೦ನೇ ತರಗತಿ ವಿದ್ಯಾರ್ಥಿನಿಯರಿಗೂ ೫೦೦ ರೂ. ವಾರ್ಷಿಕ ಹಾಜರಾತಿ ಶಿಷ್ಯವೇತನ ನೀಡಲಾಗುವುದು.

**ವಿಧವೆಯರ ಮರುವಿವಾಹ ಮತ್ತು ದೇವದಾಸಿಯರ ವಿವಾಹಕ್ಕೆ ನೆರವು**

ನಿರ್ಗತಿಕ ವಿಧವೆಯರು ಮತ್ತು ದೇವದಾಸಿಯಂತಹ ಅನಿಷ್ಟ ಪದ್ಧತಿಯಲ್ಲಿ ಸಿಲುಕಿದವರು ಜೀವನದ ಮುಖ್ಯವಾಹಿನಿಯಲ್ಲಿ ಸೇರಿ ಜೀವನ ನಡೆಸಲು ಅನುಕೂಲವಾಗುವಂತೆ ನಿರ್ಗತಿಕ ವಿಧವೆಯರ ಮತ್ತು ದೇವದಾಸಿಯರ ವಿವಾಹಕ್ಕೆ ೧೦,೦೦೦/- ರೂ. ಧನಸಹಾಯ ನೀಡಲಾಗುವುದು.

ವಿವಾಹದ ಖರ್ಚಿಗೆ ೫೦೦೦/- ರೂ. ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರದ ರೂಪದಲ್ಲಿ ೫೦೦೦/-ರೂ. ನೀಡಲಾಗುವುದು.

**ಕೇಂದ್ರ ಸರ್ಕಾರದ ಅನುದಾನಿತ ಯೋಜನೆಗಳು**

**ಉತ್ತಮ ಅಂಗನವಾಡಿ ಕಾರ್ಯಕರ್ತೆಯರಿಗೆ ರಾಜ್ಯ ಮತ್ತು ರಾಷ್ಟ್ರಪ್ರಶಸ್ತಿ.**

ಅಂಗನವಾಡಿ ಕಾರ್ಯಕರ್ತೆಯರ ಉತ್ತಮ ಸೇವೆಯನ್ನು ಗುರುತಿಸಿ ಅವರನ್ನು ಉತ್ತೇಜಿಸಲು ಹಾಗೂ ಅವರ ಗೌರವಾನ್ವಿತ ಸೇವೆಗೆ ಮಾನ್ಯತೆ ನೀಡಲು ಭಾರತ ಸರ್ಕಾರವು ಈ ಯೋಜನೆಯನ್ನು ಜಾರಿಗೆ ತಂದಿರುತ್ತದೆ.

ರಾಜ್ಯ ಮಟ್ಟದ ಪ್ರಶಸ್ತಿಗೆ ಅರ್ಹರಿರುವ ೬೦ ಜನ ಅಂಗನವಾಡಿ ಕಾರ್ಯಕರ್ತೆಯರನ್ನು ಗುರುತಿಸಿ ರೂ. ೫೦೦೦/- ಹಾಗೂ ಪ್ರಶಸ್ತಿ ಪತ್ರ ನೀಡಲಾಗುವುದು.

ರಾಜ್ಯ ಮಟ್ಟದ ಪ್ರಶಸ್ತಿಗೆ ಆಯ್ಕೆಯಾದ ಕಾರ್ಯಕರ್ತೆಯರಲ್ಲಿ ಇಬ್ಬರು ಅಂಗನವಾಡಿ ಕಾರ್ಯಕರ್ತೆಯರನ್ನು ರಾಷ್ಟ್ರ ಪ್ರಶಸ್ತಿಗೆ ನಾಮನಿರ್ದೇಶನ ಮಾಡಲಾಗುವುದು. ಅವರಿಗೆ ರೂ. ೨೫,೦೦೦/ ಮತ್ತು ಪ್ರಶಸ್ತಿ ಪತ್ರವನ್ನು ನೀಡಲಾಗುವುದು.

**ಬಾಲಿಕಾ ಸಮೃದ್ಧಿ ಯೋಜನೆ**

ಕುಟುಂಬದಲ್ಲಿ ಮತ್ತು ಸಮುದಾಯದಲ್ಲಿ ಹೆಣ್ಣು ಮಗುವಿನ ಜನನ ಹಾಗೂ ಅವಳ ತಾಯಿಯ ಬಗ್ಗೆ ಕುಟುಂಬದ ಹಾಗೂ ಸಮುದಾಯದಲ್ಲಿ ಕಂಡುಬರುವ ನಕಾರಾತ್ಮಕ ಧೋರಣೆ ಬದಲಾವಣೆ ಮಾಡುವುದು. ಶಾಲೆಯಲ್ಲಿ ಹೆಣ್ಣು ಮಕ್ಕಳ ಹಾಜರಾತಿ ಸುಧಾರಿಸುವುದು ಮತ್ತು ಶಾಲೆಗೆ ಕ್ರಮಬದ್ಧವಾಗಿ ಹಾಜರಾಗುವಂತೆ ಪ್ರೋತ್ಸಾಹಿಸುವುದು. ಬಾಲಕಿಯ ಮದುವೆಯ ವಯಸ್ಸನ್ನು ಹೆಚ್ಚಿಸುವುದು. ಹೆಣ್ಣು ಮಕ್ಕಳನ್ನು ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸುವುದು ಇದರ ಉದ್ದೇಶವಾಗಿದೆ.

ಹೆಣ್ಣು ಮಗು ಜನಿಸಿದ ತರುವಾಯ ರೂ. ೫೦೦/-ನ್ನು ಕೊಡುಗೆಯಾಗಿ ಹೆಣ್ಣು ಮಗುವಿನ ತಾಯಿಗೆ ನೀಡಲಾಗುವುದು ಮತ್ತು ೧೮ ವರ್ಷಗಳ ಸಂಚಿತ ಠೇವಣಿಯಲ್ಲಿ ಹೂಡಲಾಗುವುದು.

ಹೆಣ್ಣು ಮಗುವಿಗೆ ವಾರ್ಷಿಕ ವಿದ್ಯಾರ್ಥಿ ವೇತನ ನೀಡಲಾಗುವುದು.

೧. ೧ನೇ ತರಗತಿಯಿಂದ ೩ನೇ ತರಗತಿ- ರೂ.೨೦೦/-

೨. ೪ನೇ ತರಗತಿಯವರೆಗೆ ೩ನೇ ತರಗತಿ- ರೂ.೫೦೦/-

೩. ೫ನೇ ತರಗತಿಯವರೆಗೆ- ರೂ.೬೦೦/-

೪. ೭ನೇ ತರಗತಿಯಿಂದ ೭ನೇ ತರಗತಿ- ರೂ.೭೦೦/-

೫. ೮ನೇ ತರಗತಿಯವರೆಗೆ- ರೂ.೮೦೦/-

೬. ೯ನೇ ತರಗತಿಯಿಂದ ೧೦ನೇ ತರಗತಿವರೆಗೆ- ರೂ.೧೦೦೦/-

**ಮಕ್ಕಳ ಸಾಗಣೆ ಮತ್ತು ವಾಣಿಯ ಲೈಂಗಿಕ ಶೋಷಣೆ ತಡೆಗಟ್ಟಲು ಸ್ವಯಂಸೇವಾ ಸಂಸ್ಥೆಗಳಿಗೆ ಆರ್ಥಿಕ ನೆರವು**

ಭಾರತ ಸರ್ಕಾರದ ಈ ಯೋಜನೆಯನ್ನು ಸ್ವಯಂ ಸೇವಾ ಸಂಸ್ಥೆಗಳಿಂದ ಅನುಷ್ಠಾನಗೊಳಿಸಲಾಗುತ್ತದೆ. ಮಕ್ಕಳ ಸಾಗಣೆ ತಡೆಗಟ್ಟಲು ಸೋರ್ಸ್ ಏರಿಯಾ, ಡೆಸ್ಟಿನೇಷನ್ ಏರಿಯಾ ಹಾಗೂ ಕಂಬ್ಯಾಂಟಿಂಗ್ ಟ್ರಾಫಿಕಿಂಗ್ ಅಂಡರ್ ಸ್ಯಾಂಕ್ಷನ್ ಆಫ್ ಟ್ರಡಿಷನ್ ಯೋಜನೆಗಳ ಮುಖಾಂತರ ಆರ್ಥಿಕ ನೆರವನ್ನು ನೀಡಲಾಗುತ್ತದೆ.

ಮಾನವ ಸಾಗಣೆಗೊಳಗಾದವರಿಗೆ ತಾತ್ಕಾಲಿಕವಾಗಿ ಆಶ್ರಯ ನೀಡುವುದು, ಕೌಶಲ್ಯ ಹಾಗೂ ವೃತ್ತಿ ತರಬೇತಿ ನೀಡುವುದು, ಆರ್ಥಿಕ ಹಾಗೂ ಮಾನಸಿಕ ಪುನರ್ವಸತಿ ಕಲ್ಪಿಸುವುದು ಮತ್ತು ಕುಟುಂಬಗಳೊಡನೆ ಒಗ್ಗೂಡಿಸುವುದು ಇದರ ಉದ್ದೇಶವಾಗಿರುತ್ತದೆ.

**ಉದ್ಯೋಗಸ್ಥ ಮಹಿಳೆಯರಿಗೆ ವಸತಿ ನಿಲಯ ನಿರ್ಮಾಣ ಮತ್ತು ವಿಸ್ತರಣೆಗೆ ಅನುದಾನ**

ಅವಿವಾಹಿತೆ, ವಿಧವೆ, ಪರಿತ್ಯಕ್ತೆ, ವಿವಾಹ ವಿಚ್ಛೇದನ ಆಗಿರುವ ಮತ್ತು ಮದುವೆ ಆಗಿದ್ದು ಗಂಡ ಬೇರೆ ಊರಿನಲ್ಲಿರುವಂತಹ ಉದ್ಯೋಗಸ್ಥ ಮಹಿಳೆಯರಿಗೆ ವಸತಿ ಸೌಕರ್ಯ ಹೊಂದಲು ಆರ್ಥಿಕ ಸಹಾಯ ನೀಡುವುದೇ ಇದರ ಉದ್ದೇಶವಾಗಿದೆ. ರಾಜ್ಯದಲ್ಲಿ ೭೪ ವಸತಿ ನಿಲಯಗಳು ಈ ಧನ ಸಹಾಯ ಪಡೆದು ಕಾರ್ಯ ನಿರ್ವಹಿಸುತ್ತಿವೆ.

**ಮಹಿಳೆಯರಿಗೆ ಹಾಗೂ ಬಾಲಕಿಯರಿಗೆ ಅಲ್ಪಾವಧಿ ವಸತಿ ಗೃಹಗಳು**

ಶೋಷಣೆಗೆ ಒಳಪಟ್ಟ ಮಹಿಳೆಯರು, ಪರಿತ್ಯಕ್ತರು, ವೈವಾಹಿಕ ಜೀವನದಲ್ಲಿ ತೊಂದರೆಗೊಳಪಟ್ಟವರು ಹಾಗೂ ರಕ್ಷಣೆಯ ಅಗತ್ಯವಿರುವ ಮಹಿಳೆಯರು ಮತ್ತು ಹೆಣ್ಣು ಮಕ್ಕಳಿಗೆ ಸ್ವಯಂ ಸೇವಾ ಸಂಸ್ಥೆಯ ಮೂಲಕ ಪಾಲನೆ, ರಕ್ಷಣೆ, ಮಾರ್ಗದರ್ಶನ ತರಬೇತಿ ಇತ್ಯಾದಿಗಳನ್ನು ನೀಡಿ ಅವರು ಸಮಾಜದಲ್ಲಿ

ಹೊಂದಾಣಿಕೆ ಮಾಡಿಕೊಂಡು ಜೀವಿಸಲು ಪುನರ್ವಸತಿ ಕಲ್ಪಿಸಲು ಸ್ವಯಂ ಸೇವಾ ಸಂಸ್ಥೆಗಳಿಗೆ ಅನುದಾನ ನೀಡಲಾಗುವುದು.

**ಡಾ.ದುರ್ಗಾಬಾಯಿ ದೇಶ್‌ಮುಖ್ ಪ್ರಶಸ್ತಿ**

ಮಹಿಳಾ ಅಭಿವೃದ್ಧಿ ಕ್ಷೇತ್ರದಲ್ಲಿ ಅವಿರತವಾಗಿ ದುಡಿಯುತ್ತಿರುವ ನೋಂದಾಯಿತ ಸ್ವಯಂಸೇವಾ ಸಂಸ್ಥೆಗಳ ಸೇವಾ ಮನೋಭಾವನೆಯನ್ನು ಗುರುತಿಸಿ ಕೇಂದ್ರ ಸಮಾಜ ಕಲ್ಯಾಣ ಮಂಡಲಿಯ ಸಂಸ್ಥಾಪಕರಾದ ಡಾ. ದುರ್ಗಾಬಾಯಿ ದೇಶಮುಖ್ ಅವರ ಹೆಸರಿನಲ್ಲಿ ಐದು ಲಕ್ಷ ರೂಪಾಯಿಗಳ ನಗದು ಮತ್ತು ಪ್ರಶಸ್ತಿಯನ್ನು ಅವರ ಸ್ಮರಣಾರ್ಥ ಪ್ರತಿವರ್ಷದ ಜುಲೈ ೧೨ನೇ ದಿನಾಂಕದಂದು ಪ್ರದಾನ ಮಾಡುವ ಕಾರ್ಯವನ್ನು ಕೇಂದ್ರ ಸಮಾಜ ಕಲ್ಯಾಣ ಮಂಡಲಿಯು ೧೯೯೮ರಿಂದ ಜಾರಿಗೆ ತಂದಿರುತ್ತದೆ. ಈ ಪ್ರಶಸ್ತಿಗಾಗಿ ರಾಜ್ಯದಲ್ಲಿನ ಸ್ವಯಂ ಸೇವಾ ಸಂಸ್ಥೆಗಳು ಪ್ರಸ್ತಾವನೆಯನ್ನು ಸಲ್ಲಿಸಬಹುದಾಗಿದೆ.

**ಸ್ತ್ರೀಶಕ್ತಿ ಪುರಸ್ಕಾರ**

ಮಹಿಳಾ ಅಭಿವೃದ್ಧಿ ಕ್ಷೇತ್ರ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ತೊಡಗಿರುವ ಸ್ವಯಂ ಸೇವಾಸಂಸ್ಥೆಗಳಿಗೆ ಮಹಿಳಾ ಅಭಿವೃದ್ಧಿ ನಿಗಮಗಳಿಗೆ ರಾಷ್ಟ್ರೀಯ ಮತ್ತು ರಾಜ್ಯಮಟ್ಟದ ಮಹಿಳಾ ಆಯೋಗಗಳಿಗೆ ಈ ಕೆಳಕಂಡ ಮಹಿಳೆಯರ ಹೆಸರಿನಲ್ಲಿ ಒಂದು ಲಕ್ಷ ರೂಪಾಯಿಗಳ ನಗದು ಮತ್ತು ಪ್ರಶಸ್ತಿ ಪತ್ರವನ್ನು ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಪ್ರತಿವರ್ಷ ನೀಡಲಾಗುವುದು.

೧. ದೇವಿ ಅಹಲ್ಯಾಬಾಯಿ ಹೋಲ್ಕರ್

೨. ಕನ್ನಗಿ

೩. ಮಾತಾ ಜೀಜಾಬಾಯಿ

೪. ರಾಣಿ ಗೈಡನಾಲೋ ಜೀಲಾಂಗ್

೫. ರಾಣಿ ಲಕ್ಷ್ಮೀಬಾಯಿ

ಹೀಗೆ ಮಹಿಳೆಯರ ಬದುಕನ್ನು ಉತ್ತಮಪಡಿಸಲು ಮತ್ತು ದಯನೀಯ ಸ್ಥಿತಿಯಲ್ಲಿರುವ ಮಹಿಳೆಯರನ್ನು ಸಬಲರನ್ನಾಗಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಕೇಂದ್ರ ಸರ್ಕಾರದ ನೆರವಿನೊಂದಿಗೆ ಕಾರ್ಯ ನಿರ್ವಹಿಸುತ್ತಿದೆ.

**ಅಂಗನವಾಡಿ ಕಟ್ಟಡ ನಿರ್ಮಾಣ**

**ಉದ್ದೇಶ**

ಸಮಗ್ರ ಬಾಲವಿಕಾಸ ಯೋಜನೆಯಡಿಯಲ್ಲಿ ಅಂಗನವಾಡಿ ಕೇಂದ್ರಗಳಿಗೆ ಬರುವ ಮಕ್ಕಳಿಗೆ ಶಾಲಾಪೂರ್ವ ಶಿಕ್ಷಣ ನಡೆಸಲು, ಮಕ್ಕಳಿಗೆ ಸುರಕ್ಷತೆ ಒದಗಿಸಲು ಹಾಗೂ ಮಳೆ ಗಾಳಿ ಮತ್ತು ಬಿಸಿಲಿನಲ್ಲಿ ರಕ್ಷಣೆ ನೀಡಲು ಕಟ್ಟಡದ ಅವಶ್ಯಕತೆ ಇದೆ. ಅಲ್ಲದೆ ಕೇಂದ್ರಗಳಿಗೆ ವಿತರಿಸುವ ಸಾಮಗ್ರಿಗಳನ್ನು ಸುಭದ್ರವಾಗಿ ಶೇಖರಿಸಲು ಕಟ್ಟಡದ ಅವಶ್ಯಕತೆ ಇರುತ್ತದೆ.

## ಅ. ಕಟ್ಟಡ ನಿರ್ಮಾಣದ ಅನುದಾನ ಮೂಲಗಳು

### ೧. ರಾಜ್ಯ ಸರ್ಕಾರದ ಅನುದಾನ

ಕಟ್ಟಡ ನಿರ್ಮಾಣಕ್ಕೆ ಇಲಾಖೆಯಿಂದ ಪ್ರತಿ ಅಂಗನವಾಡಿ ಕಟ್ಟಡಕ್ಕೆ ರೂ. ೫೦.೦೦೦ಗಳ ಹೊಂದಾಣಿಕೆ ಅನುದಾನವಾಗಿ ಒದಗಿಸಲಾಗುತ್ತಿದೆ. ಉಳಿದ ಮೊತ್ತವನ್ನು ಜಿಲ್ಲಾ ಪಂಚಾಯತ್ ವತಿಯಿಂದ ಅಥವಾ ಸಾರ್ವಜನಿಕ ವಂತಿಗೆಯಿಂದ ಭರಿಸಲಾಗುತ್ತಿದೆ.

### ೨. ನಬಾ಼ರ್ಡ್ ಸಂಸ್ಥೆ ಅನುದಾನ

ನಬಾರ್ಡ್ ಸಂಸ್ಥೆಯ ನೆರವಿನಿಂದ ೨೦೦೨-೦೩ನೇ ಸಾಲಿನಿಂದ ೧,೬೬೭ ಅಂಗನವಾಡಿ ಕಟ್ಟಡಗಳನ್ನು ೩ ಹಂತಗಳಲ್ಲಿ ನಿರ್ಮಾಣ ಮಾಡಲು ಕೈಗೆತ್ತಿಕೊಳ್ಳಲಾಗಿದೆ. ಗಟ್ಟಿ ಮಣ್ಣಿನ ಕಟ್ಟಡಕ್ಕೆ ರೂ.೧.೩೨ ಲಕ್ಷದಂತೆ ಕಪ್ಪು ಮಣ್ಣು ಅಥವಾ ಗುಡ್ಡಗಾಡು ಪ್ರದೇಶದಲ್ಲಿ ಕಟ್ಟುವ ಕಟ್ಟಡಕ್ಕೆ ರೂ. ೧..೪೨ ಲಕ್ಷ ನೀಡಲಾಗುವುದು. ೨೦೦೫-೦೬ನೇ ಸಾಲಿನಿಂದ ಕಟ್ಟಡ ನಿರ್ಮಾಣದ ದರವನ್ನು ಗಟ್ಟಿ ಮಣ್ಣಿನಿಂದ ಕಟ್ಟುವ ಕಟ್ಟಡಕ್ಕೆ ೨.೪೦ ಲಕ್ಷ ಹಾಗೂ ಕಪ್ಪು ಮಣ್ಣಿನಲ್ಲಿ ಕಟ್ಟುವ ಕಟ್ಟಡಕ್ಕೆ ೨.೫೦ ಲಕ್ಷ ರೂಪಾಯಿ ನಿಗದಿಪಡಿಸಲಾಗಿದೆ.

### ಕಟ್ಟಡ ನಿರ್ಮಾಣ ಏಜೆನ್ಸಿ

ಆಯಾ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಟ್ಟಡಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಕರ್ನಾಟಕ ಭೂ ಸೇವಾ ನಿಗಮ ಅಥವಾ ನಿರ್ಮಿತ ಕೇಂದ್ರಗಳಿಂದ ಕಟ್ಟಿಸಲಾಗುತ್ತಿದೆ.

ನಬಾರ್ಡ್ ಸಂಸ್ಥೆಯ ಆರ್ಥಿಕ ನೆರವಿಂದ ಅಂಗನವಾಡಿ ಕಟ್ಟಗಳನ್ನು ನಿರ್ಮಿಸಲಾಗುತ್ತಿದೆ. ಕಟ್ಟಡ ನಿರ್ಮಾಣದ ಖರ್ಚಿನ ಶೇ.೧೦ರಷ್ಟು ನಬಾರ್ಡ್‌ನಿಂದ ಸಾಲ ಪಡೆಯಲಾಗುತ್ತಿದೆ. ಉಳಿದ ಶೇ. ೧೦ರಷ್ಟು ಖರ್ಚನ್ನು ರಾಜ್ಯ ಸರ್ಕಾರದ ಅನುದಾನದಲ್ಲಿ ಭರಿಸಲಾಗುತ್ತಿದೆ. ಪ್ರತಿ ಕಟ್ಟಡಕ್ಕೆ ಗಟ್ಟಿ ಮಣ್ಣಿನಲ್ಲಿ ರೂ. ೧.೬೦ ಲಕ್ಷ ಹಾಗು ಕಪ್ಪು ಮಣ್ಣು ಮತ್ತು ಗುಡ್ಡ ಗಾಡು ಪ್ರದೇಶದಲ್ಲಿನ ಕಟ್ಟಡ ರೂ. ೧.೭೦ ಲಕ್ಷ ಎಂದು ನಿಗದಿಪಡಿಸಲಾಗಿದೆ.

ಈ ಕಾರ್ಯಕ್ರಮಕ್ಕಾಗಿ ೨೦೦೬-೦೭ನೇ ಸಾಲಿನಲ್ಲಿ ರೂ. ೮೦೦ ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

ಇಲಾಖೆ ಅನುದಾನದಲ್ಲಿ ಅಂಗನವಾಡಿ ಕಟ್ಟಡ ನಿರ್ಮಾಣ ಇಲಾಖಾ ವತಿಯಿಂದ ನಿರ್ಮಿಸಲು ಒದಗಿಸಲಾದ ಅನುದಾನವನ್ನು, ಕೇಂದ್ರ ಸರ್ಕಾರದ ಆರ್ಥಿಕ ಸಹಾಯದೊಂದಿಗೆ ನಿರ್ಮಿಸುತ್ತಿದ್ದು ಮೊದಲ ಅಂಗನವಾಡಿ ಕಟ್ಟಡಗಳಿಗೆ ರೂ. ೫೦೦೦೦/- ಗಳನ್ನು ರಾಜ್ಯದ ಪಾಲಿನ ಅನುದಾನವೆಂದು ಪರಿಗಣಿಸಲಾಗಿದೆ.

೨೦೦೬-೦೭ನೇ ಸಾಲಿನಲ್ಲಿ ಒದಗಿಸಲಾದ ಅನುದಾನ ರೂ. ೧೭೩.೫೫ ಲಕ್ಷ

ಜಿಲ್ಲಾ ಪಂಚಾಯತ್‌ನಿಂದ ಬಿಡುಗಡೆಯಾದ ಅನುದಾನ ರೂ. ೭೦.೮೧ ಲಕ್ಷ

ಖರ್ಚು ರೂ. ೩೬.೮೫ ಲಕ್ಷ

## ೪.೫. ಪ್ರಶ್ನಾವಳಿ

ಸಂದರ್ಶಕರು ಅಲಂಕಾರ್ ಅನಿಲ

ಅಂಗನವಾಡಿ ಕಾರ್ಯಕರ್ತೆಯರ ಒಂದು ಸಾಮಾಜಿಕ ಅಧ್ಯಯನ

೧. ಕಾರ್ಯಕರ್ತೆಯ ಹೆಸರು :

೨. ವಯಸ್ಸು :

೩. ವೈವಾಹಿಕ ಸ್ಥಾನಮಾನ :

೧. ವಿವಾಹಿತೆ ☐ ೨. ಅವಿವಾಹಿತೆ ☐ ೩. ವಿಧವೆ ☐

೪. ಕುಟುಂಬ ಪ್ರಕಾರ ೧. ಅವಿಭಕ್ತ ☐ ೨. ವಿಭಕ್ತ ☐

೫. ಶಿಕ್ಷಣ

೧. ಪ್ರಾಥಮಿಕ ☐ ೨. ಮಾಧ್ಯಮಿಕ ☐

೩. ಪ್ರೌಢ ☐ ೪. ಕಾಲೇಜು ಮಟ್ಟ ☐

೬. ಧರ್ಮ

೧. ಹಿಂದೂ ☐ ೨. ಮುಸ್ಲಿಂ ☐

೨. ಕ್ರಿಶ್ಚಿಯನ್ ☐ ೪. ಇತರೆ ☐

೭. ನೀವು ಅಂಗನವಾಡಿ ಕಾರ್ಯಕರ್ತೆಯರಾಗಲು ಕಾರಣವೇನು? ಅಥವಾ ಹಿನ್ನೆಲೆ ಏನು?

೧. ಮಕ್ಕಳ ಸೇವೆ ಮಾಡಲು ☐

೨. ಸಾವನೆಗೋಸ್ಕರ ☐

೩. ನನಗೆ ಬಂದ ಅವಕಾಶ ☐

೮. ನೀವು ಅಂಗನವಾಡಿ ಕಾರ್ಯಕರ್ತೆಯಾಗಿ ಎಷ್ಟು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದೀರಿ?

☐

೯. ನೀವು ನಡೆಸುತ್ತಿರುವ ಅಂಗನವಾಡಿ ಕೇಂದ್ರದ ಕಟ್ಟಡವು

೧. ಸ್ವಂತದ್ದೇ ☐ ೨. ಬಾಡಿಗೆಯದೇ ☐

೩. ಪಂಚಾಯತಿಯದೇ ☐ ೪. ಇತರೆ ☐

೧೦. ನಿಮ್ಮ ಕೇಂದ್ರದಲ್ಲಿ ಎಷ್ಟು ಮಕ್ಕಳನ್ನು ನೊಂದಾಯಿಸಿಕೊಳ್ಳುತ್ತೀರಿ? ☐

೧೧. ನಿಮ್ಮ ಕೇಂದ್ರದಲ್ಲಿ ಪ್ರವೇಶ ಪಡೆಯುವ ಮಕ್ಕಳ ವಯಸ್ಸು ಎಷ್ಟಿರಬೇಕು?

೧. ೦ ಯಿಂದ ೨ ವರ್ಷ

೨. ೨ ರಿಂದ ೪ ವರ್ಷ

೩. ೪ ರಿಂದ ೬ ವರ್ಷ

೧೨. ನಿಮ್ಮ ಕೇಂದ್ರದಿಂದ ಮಕ್ಕಳಿಗೆ ಯಾವ ತರಹದ ಶಿಕ್ಷಣ ನೀಡುತ್ತೀರಾ?

೧. ಶಾಲಾ ಪೂರ್ವ ಶಿಕ್ಷಣ

೨. ರೂಢಿಗತವಾದ ಶಾಲಾಪೂರ್ವ ಶಿಕ್ಷಣ

೩. ಆಟೋಪಕರಣಗಳ ಶಿಕ್ಷಣ

೧೩. ನಿಮ್ಮ ಕೇಂದ್ರದಿಂದ ಮಕ್ಕಳಿಗೆ ಯಾವ ತರಹದ ಆಹಾರ ನೀಡುತ್ತೀರಿ?

೧. ಪೂರಕ ಪೌಷ್ಟಿಕ ಆಹಾರ

೨. ಪೌಷ್ಟಿಕ ಆಹಾರ

೩. ಇತರೆ

೧೪. ನಿಮ್ಮ ಕೇಂದ್ರದಲ್ಲಿ ಪ್ರವೇಶ ಪಡೆದ ಮಕ್ಕಳನ್ನು ಎಷ್ಟು ದಿವಸಗಳಿಗೊಮ್ಮೆ ಆರೋಗ್ಯ ತಪಾಸಣೆ ಮಾಡಿಸುತ್ತೀರಿ?

೧. ದಿನಾಲು

೨. ವಾರಕ್ಕೊಮ್ಮೆ

೩. ೧೫ ದಿನಗಳಿಗೊಮ್ಮೆ

೪. ತಿಂಗಳಿಗೊಮ್ಮೆ

೧೫. ನಿಮ್ಮ ಕೇಂದ್ರದಿಂದ ಮಕ್ಕಳಿಗೆ ರೋಗ ನಿರೋಧಕ ಚುಚ್ಚುಮದ್ದು ಎಷ್ಟು ದಿವಸಕ್ಕೊಮ್ಮೆ ಕೊಡಿಸುತ್ತೀರಾ?

೧. ೧೫ ದಿವಸಕ್ಕೊಮ್ಮೆ

೨. ತಿಂಗಳಿಗೊಮ್ಮೆ

೩. ೩ ತಿಂಗಳಿಗೊಮ್ಮೆ

೧೬. ನಿಮ್ಮ ಕೇಂದ್ರಕ್ಕೆ ಅಧಿಕಾರಿಗಳು ವಿಚಾರಣೆ ಮಾಡಲು ಎಷ್ಟು ದಿವಸಕ್ಕೊಮ್ಮೆ ಭೇಟಿ ಕೊಡುತ್ತಾರೆ?

೧. ೧೫ ದಿವಸಕ್ಕೊಮ್ಮೆ

೨. ತಿಂಗಳಿಗೊಮ್ಮೆ

೩. ೨ ತಿಂಗಳಿಗೊಮ್ಮೆ

೧೭. ನಿಮ್ಮ ಕೇಂದ್ರದಲ್ಲಿ ಮಹಿಳೆಯರಿಗೆ ಸಭೆಯನ್ನು ನಡೆಸುತ್ತೀರಾ?

೧. ಹೌದು

೨. ಇಲ್ಲ

೧೮. ಗ್ರಾಮೀಣ ಜನತೆಯಲ್ಲಿ ತಮ್ಮ ಮಕ್ಕಳನ್ನು ಅಂಗನವಾಡಿ ಕೇಂದ್ರಗಳಿಗೆ ಕಳಿಸುವುದರ ಬಗ್ಗೆ ಅರಿವು ಮೂಡಿಸುತ್ತೀರಾ?

೧೯. ಸಣ್ಣ ಕುಟುಂಬದ ಬಗ್ಗೆ ಮಾಹಿತಿಯನ್ನು ನೀಡುತಿದ್ದೀರಾ?

೧. ಹೌದು [ ] ೨. ಇಲ್ಲ [ ]

೨೦. ನಿಮ್ಮ ಕೇಂದ್ರದಿಂದ ನಿಮ್ಮ ಕೇಂದ್ರದಲ್ಲಿ ನಡೆಸುವ ಸಭೆಯಲ್ಲಿ ಮಹಿಳೆಯರಿಗೆ ಯಾವ ವಿಷಯದ ಬಗ್ಗೆ ಮಾಹಿತಿ ನೀಡುತ್ತೀರಾ?

೧. ಜನಸಂಖ್ಯೆ ನಿಯಂತ್ರಣದ ಬಗ್ಗೆ [ ]

೨. ಆರೋಗ್ಯದ ಬಗ್ಗೆ [ ]

೩. ಶಿಕ್ಷಣದ ಬಗ್ಗೆ [ ]

೪. ಮೇಲಿನ ಎಲ್ಲಾ ವಿಷಯಗಳು [ ]

೨೧. ನಿಮ್ಮ ಕೇಂದ್ರದಿಂದ ಗರ್ಭಿಣಿ ಮತ್ತು ಬಾಣಂತಿ ಮಹಿಳೆಯರಿಗೆ ಪೌಷ್ಟಿಕ ಆಹಾರ ನೀಡುತ್ತೀರಾ?

೧. ಹೌದು [ ] ೨. ಇಲ್ಲ [ ]

೨೨. ಹೌದು ಎನ್ನುವುದಾದರೆ ಎಷ್ಟು ಮಹಿಳೆಯರಿಗೆ ಪೌಷ್ಟಿಕ ಆಹಾರ ನೀಡುತ್ತೀರಾ

೧. ಒಬ್ಬ ಮಹಿಳೆಗೆ [ ]

೨. ಇಬ್ಬರು ಮಹಿಳೆಯರಿಗೆ [ ]

೩. ಆರು ಮಹಿಳೆಯರಿಗೆ [ ]

೨೩. ಗರ್ಭಿಣಿ ಮಹಿಳೆಯರಿಗೆ ಹೆರಿಗೆ ಭತ್ಯೆ ನೀಡುತ್ತೀರಾ

೧. ಹೌದು [ ] ೨. ಇಲ್ಲ [ ]

೨೪. ಹೌದು ಎನ್ನುವುದಾದರೆ ಎಷ್ಟು ಹೆರಿಗೆಯವರೆಗೆ ಭತ್ಯೆ ನೀಡಿತ್ತೀರಾ

೧. ಒಂದು ಮಗು [ ]

೨. ಎರಡು ಮಗು [ ]

೩. ಮೂರು ಮಗು [ ]

೨೫. ನಿಮ್ಮ ಕೇಂದ್ರದಿಂದ ಹೆಣ್ಣು ಮಕ್ಕಳ ಕಲ್ಯಾಣ ಕಾರ್ಯಕ್ರಮ ಕೈಗೊಂಡಿದ್ದೀರಾ

೧. ಹೌದು [ ] ೨. ಇಲ್ಲ [ ]

೨೬. ಹೌದು ಎನ್ನುವುದಾದರೆ ಎಂತಹ ಕಾರ್ಯಕ್ರಮಗಳು?

೧. ಸ್ತ್ರೀ ಶಕ್ತಿ ಯೋಜನೆ [ ]

೨. ಮಹಿಳಾ ಕಲ್ಯಾಣ ಯೋಜನೆ [ ]

೩. ಮಹಿಳಾ ಸಾಕ್ಷರತಾ ಕಾರ್ಯಕ್ರಮಗಳು [ ]

೨೭. ನೀವು ವ್ಯವಸ್ಥೆ ಮಾಡುವ ಮಹಿಳಾ ಮಂಡಳ ಮತ್ತು ಗ್ರಾಮ ಸಮಿತಿ ಸಭೆಗಳಲ್ಲಿ ನೀವು ಮಹಿಳೆಯರೊಂದಿಗೆ ಯಾವ ವಿಷಯದ ಬಗ್ಗೆ ಚರ್ಚಿಸುತ್ತೀರಿ?

೧. ಆರೋಗ್ಯ ಮತ್ತು ಪೌಷ್ಟಿಕಾಂಶ ಹಾಗೂ ಸ್ವಚ್ಛತೆ ಬಗ್ಗೆ ☐

೨. ಮತದಾನದ ಬಗ್ಗೆ ☐

೩. ಧಾರ್ಮಿಕತೆಯ ಬಗ್ಗೆ ☐

೨೮. ನೀವು ಮಹಿಳಾ ಸ್ವಸಹಾಯ ಸಂಘಗಳನ್ನು ನಡೆಸುತ್ತೀರಾ?

೧. ಹೌದು ☐ ೨. ಇಲ್ಲ ☐

೨೯. ಹೌದು ಎನ್ನುವುದಾರೆ ನಿಮ್ಮ ಕೇಂದ್ರದಿಂದ ಎಷ್ಟು ಕೇಂದ್ರಗಳನ್ನು ನಡೆಸುತ್ತೀರಾ?

೧. ಒಂದು ☐ ೨. ಮೂರು ☐

೩. ಐದು ☐ ೪. ಆರು ☐

೩೦. ಕಿರಿಯ ಆರೋಗ್ಯ ಸಹಾಯಕಿಯರು ನಿಮ್ಮ ಅಂಗನವಾಡಿ ಕೇಂದ್ರಕ್ಕೆ ಭೇಟಿ ಕೊಟ್ಟು ಯಾವ ವಿಷಯದ ಬಗ್ಗೆ ಚರ್ಚೆ ನಡೆಸುತ್ತೀರಾ?

೧. ಶಿಶು ಪಾಲನೆ ಮತ್ತು ಆರೋಗ್ಯದ ಬಗ್ಗೆ ☐

೨. ಶಿಕ್ಷಣದ ಬಗ್ಗೆ ☐

೩. ಇತರೆ ☐

೩೧. ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಯಾಗಬೇಕಾದರೆ ಸರ್ಕಾರವು ಯಾವ ಯೋಜನೆಗಳಿಗೆ ಹೆಚ್ಚಿನ ಮಹತ್ವ ಕೊಡಬೇಕು?

೧. ಆರ್ಥಿಕ ಭದ್ರತೆ ಒದಗಿಸುವುದು ☐

೨. ಶಿಕ್ಷಣ ವ್ಯವಸ್ಥೆ ಒದಗಿಸಲು ☐

೩. ರಾಜಕೀಯ ಅಧಿಕಾರ ಕೊಡುವುದು ☐

೪. ಇತರೆ ☐

೩೨. ಪ್ರಸ್ತುತ ಮಹಿಳೆಗಿರುವ ಕಲ್ಯಾಣ ಕಾರ್ಯಕ್ರಮಗಳು ಯಶಸ್ವಿಯಾಗಿವೆಯೇ?

೧. ಹೌದು ☐ ೨. ಇಲ್ಲ ☐

೩೩. ಸರಕಾರವು ಕೊಡುವ ಸಹಾಯಧನವು ನಿಮಗೆ ತೃಪ್ತಿ ತಂದಿದೆಯಾ?

೩೪. ಪ್ರಸ್ತುತ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಯ ಬಗ್ಗೆ ಸಂಪೂರ್ಣ ತೃಪ್ತಿ ಇದೆಯೇ?

೩೫. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯ ಬಗ್ಗೆ ನಿಮ್ಮ ಅಭಿಪ್ರಾಯ?

# ಅಧ್ಯಾಯ ಐದು

ಸ್ವತಂತ್ರ ಭಾರತವು ಹಮ್ಮಿಕೊಂಡಿರುವ ಅನೇಕ ಅಭಿವೃದ್ಧಿ ಯೋಜನೆಗಳಲ್ಲಿ ಸಮಗ್ರ ಬಾಲವಿಕಾಸ ಸೇವಾ ಯೋಜನೆಯು ಕೂಡ ಒಂದಾಗಿದೆ. ಇದು ಮೇಲ್ನೋಟಕ್ಕೆ ಒಂದು ಚಿಕ್ಕ ಯೋಜನೆ ಎನಿಸಿದರೂ ಭಾವಿ ಭಾರತದ ಸರ್ವತೋಮುಖ ಅಭಿವೃದ್ಧಿಯ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾಗಿದೆ. ಸಾಮಾನ್ಯವಾಗಿ ಮಕ್ಕಳ ವಿಕಾಸಕ್ಕೆ ಹಿಂದೆ ಅಷ್ಟೊಂದು ಲಕ್ಷ್ಯ ಕೊಡುತ್ತಿರಲ್ಲಿ. ಆದರೆ ೧೯೭೫ರ ತರುವಾಯ ಇದಕ್ಕೆ ಎಲ್ಲಿಲ್ಲದ ಮಹತ್ವ ಕೊಟ್ಟು ಅವರ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳಲಾಯಿತು. ಈ ಸೇವೆಗಳು ಪ್ರಮುಖವಾಗಿ ಪೂರಕ ಪೌಷ್ಟಿಕ ಆಹಾರ ಅಂದರೆ, ಆರೋಗ್ಯ ತಪಾಸಣೆ, ಮಾಹಿತಿ ಸೇವೆಗಳು ರೋಗನಿರೋಧಕ ಚುಚ್ಚು ಮದ್ದು ಮತ್ತು ಆರೋಗ್ಯ ಶಿಕ್ಷಣ ಹಾಗೂ ರೂಢಿಗತವಲ್ಲದ ಶಾಲಾಪೂರ್ವ ಶಿಕ್ಷಣ. ಪೌಷ್ಟಿಕ ಆಹಾರ ಸಾಮಾನ್ಯವಾಗಿ ಭಾರತದಂತಹ ಬಡದೇಶದಲ್ಲಿ ಜನರಿಗೆ ತಮ್ಮ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ನೀಡಿ ಬೆಳೆಸಲು ಅಸಮರ್ಥರಾಗಿರುವರು. ಹೀಗಾಗಿ ಮಕ್ಕಳ ಆರೋಗ್ಯಕ್ಕೆ ಅವರು. ಅವಶ್ಯವಿರುವ ಆಹಾರ ಸಿಗದೇ ಅವರು ರೋಗಿಗಳು, ಅಥವಾ ಅಂಗವಿಕಲರು ಆಗಬಹುದು. ಅಂಥ ಕುಟುಂಬದ ಮಕ್ಕಳನ್ನು ಆಯ್ಕೆ ಮಾಡಿ ಅವರಿಗೆ ಅಂಗನವಾಡಿಗಳ ಮೂಲಕ ಪೌಷ್ಟಿಕ ಪೂರಕ ಆಹಾರವನ್ನು ನೀಡುವರು.

ಗರ್ಭಿಣಿ ಸ್ತ್ರೀಯರಿಗೆ ಮತ್ತು ಹಾಲುಣಿಸುವ ತಾಯಂದಿರಿಗೆ ಪೌಷ್ಟಿಕ ಆಹಾರ ಮಾಹಿತಿಯನ್ನು ನೀಡುವುದು.

ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಪ್ರಮುಖ ಪಾತ್ರ ವಹಿಸುತ್ತಿದ್ದಾರೆ. ಗ್ರಾಮಗಳಿಂದ ಹಿಡಿದು ಪಟ್ಟಣ ನಗರಗಳಲ್ಲಿ ಹಲವಾರು ರೀತಿಯ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಶಾಲಾಪೂರ್ವ ಮಕ್ಕಳ ಕಲಿಯುವಿಕೆ ಮತ್ತು ಅವರಿಗೆ ಪೂರಕ ಪೌಷ್ಟಿಕ ಆಹಾರ ಒದಗಿಸುವುದು, ಆರೋಗ್ಯದ ಬಗ್ಗೆ ಪರಿಶೀಲಿಸುವುದು, ಮಕ್ಕಳು ಮತ್ತು ತಾಯಂದಿರ ಕುಟುಂಬಗಳ ಭೇಟಿ ಅವರ ಆರೋಗ್ಯದ ಸ್ಥಿತಿಗತಿಗಳನ್ನು ಪರಿಶೀಲಿಸುವುದು. ಸಣ್ಣ ಪುಟ್ಟ ರೋಗಗಳಿಗೆ ಚಿಕಿತ್ಸೆ ನೀಡುವುದು, ಅಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಮಾಹಿತಿ ಒದಗಿಸುವುದು ಸೇರಿದಂತೆ ಸರ್ಕಾರ

ಹಲವು ಕುಟುಂಬ ಹಾಗೂ ಮಕ್ಕಳ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಸೇವೆ ಅವಿಸ್ಮರಣೀಯವಾಗಿದೆ.

ಅಂಗನವಾಡಿ ಕಾರ್ಯಕರ್ತೆಯರು ಕುಟುಂಬ ಕಲ್ಯಾಣ ಹಾಗೂ ಮಕ್ಕಳ ಅಭಿವೃದ್ಧಿಯಲ್ಲಿ ಯಶಸ್ವಿಕಾರ್ಯ ಕ್ರಮಗಳನ್ನು ಹಮ್ಮಿಕೊಳ್ಳಲು ರಾಷ್ಟ್ರ ಸಂಸ್ಥೆಯಾದ **UNICE** (ಯುನಿಸಫ್ ಯುನೆಸೆಪ್ ಧನಸಹಾಯವನ್ನು ಮಾಡುತ್ತಿದೆ) ಪರಿಶ್ರಮಿಸುತ್ತಿದೆ. ಇದರ ಜೊತೆಗೆ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದಿದ್ದು ಅವುಗಳಲ್ಲಿ ಕೆಲವುಗಳನ್ನು ತಿಳಿಸಲಾಗಿದೆ.

**ಯೋಜನೆಗಳು**

* ಮನೆಗಳಲ್ಲಿ ಐಯೋಡಿನ್‌ಯುಕ್ತ ಉಪ್ಪಿನ ಬಳಕೆಯಲ್ಲಿ ಹೆಚ್ಚಳ.
* ಶೇಕಡ ೭೫ರಷ್ಟು ಶಾಲೆಗಳಿಗೆ ನೀರು ಮತ್ತು ಶೌಚಾಲಯ ಪೂರೈಕೆ.
* ಶೇಕಡ ೭೫ರಷ್ಟು ಸರಕಾರಿ ಶಾಲೆಗಳ ಪ್ರೌಢರಿಗೆ ಹೆಚ್‌ಐವಿ ಏಡ್ಸ್ ತಡೆ ಕುರಿತ ಶಿಕ್ಷಣ ಗೃಹ ನೈರ್ಮಲ್ಯೀಕರಣದಲ್ಲಿ ಹೆಚ್ಚು ಸಾಧನೆ.
* ನವಜಾತ ಶಿಶು ಮತ್ತು ಮಕ್ಕಳ ಸಮಗ್ರ ನಿರ್ವಹಣೆ ಅಳವಡಿಕೆ.

ತನ್ನ ವೈಯಕ್ತಿಕ ಕುಟುಂಬದ ಸ್ಥಿತಿಗತಿ ಲೆಕ್ಕಿಸದೆ ಸಮಾಜದ ಹಲವಾರು ಕುಟುಂಬಗಳ ಮಕ್ಕಳ ಮತ್ತು ಮಹಿಳೆಯರ ಬೆಳವಣಿಗೆ ಹಾಗೂ ಆರೋಗ್ಯ ಅಲ್ಲದೆ ಸಮಾಜದ ವಿವಿಧ ಸ್ಥಿತಿಗತಿಗಳ ಬಗ್ಗೆ ಕಾಳಜಿ ವಹಿಸುವ ಈ ಅಂಗನವಾಡಿ ಕಾರ್ಯಕರ್ತೆಯರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಶ್ರಮ ಹೆಚ್ಚು ಕಡಿಮೆ ವೇತನ ಪಡೆಯುತ್ತಿರುವ ಅಂಗನವಾಡಿ ಕಾರ್ಯಕರ್ತೆಯರ ಉದ್ಯೋಗ ಇನ್ನೂ ಖಾಯಂಗೊಳಿಸಿಲ್ಲ. ಕುಟುಂಬದಲ್ಲಿ ಹಾಗೂ ಹೊರಗೆ ಅವರು ಮಾನಸಿಕ, ದೈಹಿಕ, ಸಾಮಾಜಿಕವಾಗಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಸರ್ಕಾರಗಳು ಅಂಗನವಾಡಿ ಕಾರ್ಯಕರ್ತೆಯರಿಂದ ಹೆಚ್ಚಿನ ಕೆಲಸಗಳನ್ನು ತೆಗೆದುಕೊಳ್ಳುತ್ತವೆ. ಆದರೆ ಅವರ ಬದುಕಿಗೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸುವುದರ ಕುರಿತು ಗಮನ ಹರಿಸಿಲ್ಲ. ಅವರಿಂದ ಸಾಕಷ್ಟು ದುಡಿಸಿಕೊಳ್ಳುತ್ತಿರುವ ಸರ್ಕಾರಗಳು ಅವರ ಉದ್ದೇಶವನ್ನು ಖಾಯಂಗೊಳಿಸಿಲ್ಲ. ಈ ಹಿನ್ನೆಲೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಹಲವಾರು ಹೋರಾಟಗಳನ್ನು ಮಾಡಿದರೂ ಪ್ರಯೋಜನವಾಗಿಲ್ಲ ಎಂದು ಹೇಳಬಹುದು.

ಸಮಗ್ರ ಶಿಶು ಅಭಿವೃದ್ಧಿಯ ಐದು ಯೋಜನೆಗಳು ಪಾಂಡಿಚೇರಿಯ ೭೮೮ ಅಂಗನವಾಡಿ ಕೇಂದ್ರಗಳಲ್ಲಿ ಎಲ್ಲವೂ ಸಕ್ರಿಯಾಗಿ ಕಾರ್ಯ ನಿರ್ವಹಿಸುತ್ತಿವೆ. ಎಲ್ಲ ರಾಜ್ಯಗಳಲ್ಲಿ ಇರುವ ಅಂಗನವಾಡಿಗಳ ಕಾರ್ಯನಿರ್ವಹಣೆಯನ್ನೇ ಇಲ್ಲಿಯೂ ವಹಿಸಲಾಗಿದೆ. ಇಲ್ಲಿನ ಕೆಲಸದ ಅವಧಿ ಬೆಳಗ್ಗೆ ೯ರಿಂದ ಸಂಜೆ ೪ರವರೆಗೆ ಇದೆ. ಮಕ್ಕಳ ಪಾಲನೆ ಪೋಷಣೆಯೇ ಇಲ್ಲಿಯ ಸಿಬ್ಬಂದಿಯ ಮುಖ್ಯ ಕೆಲಸ. ಅಲ್ಲಿನ ರಾಜ್ಯ ಸರಕಾರ ಸಿ ಗುಂಪು ವೇತನವಾಗಿ ಕಾರ್ಯಕರ್ತೆಯವರಿಗೆ ರೂ.೧೨ ಸಾವಿರ ಹಾಗೂ ಸಹಾಯಕಿಯರಿಗೆ

ರೂ. ೮ ಸಾವಿರ ನೀಡಲಾಗುತ್ತಿದ್ದು ಪಿಂಚಣಿ ಭವಿಷ್ಯನಿಧಿ ಸೌಲಭ್ಯವು ಇದೆ. ಕಾರ್ಯಕರ್ತೆಯರಿಗೆ ಉತ್ತಮ ಸಂಬಳ ನೀಡುವುದರ ಜತೆಯಲ್ಲಿ ನೌಕರರು ಎಂಬ ಘನತೆಯನ್ನು ಒದಗಿಸಿದ್ದು ಮಹಿಳೆ ಮತ್ತು ಮಕ್ಕಳ ಕಲ್ಯಾಣದ ಬಗೆಗಿನ ಆ ರಾಜ್ಯದ ಕಾಳಜಿಯನ್ನು ತೋರಿಸುತ್ತದೆ.

ಗ್ರಾಮಾಂತರ ಭಾಗದಲ್ಲಿ ಗರ್ಭಿಣಿಯರ ಇಲ್ಲವೇ ಶಿಶುಗಳ ಮರಣದ ಪ್ರಮಾಣ ಈಗ ಗಣನೀಯವಾಗಿ ಕಡಿಮೆಯಾಗಲು ಮುಖ್ಯ ಕಾರಣ ಅಂಗನವಾಡಿ ವ್ಯವಸ್ಥೆ. ಅಂಗನವಾಡಿ ಕಾರ್ಯಕರ್ತೆಯರು ಗ್ರಾಮೀಣ ಆರೋಗ್ಯ ವ್ಯವಸ್ಥೆಯ ಬೆನ್ನೆಲುಬಾಗಿ ಸೇವೆ ಸಲ್ಲಿಸುತ್ತಿರುವುದರಿಂದ ಅವರ ಸೇವೆ ಅಗತ್ಯವಾಗಿದೆ.

ಅಂಗನವಾಡಿ ಕಾರ್ಯಕರ್ತೆಯರಿಗೆ ಹಾಗೂ ಸಹಾಯಕಿಯರಿಗೆ ಈಗ ವಹಿಸಿರುವ ಜವಾಬ್ದಾರಿ ಸಾಕು. ಆದರೆ ಗೌರವಾನ್ವಿತ ಜೀವನ ನಡೆಸಲು ಅಗತ್ಯ ಎನಿಸಿದ ಸಂಬಳದ ಜತೆಗೆ ಸೇವಾ ಭದ್ರತೆ ಬೇಕಾಗಿದೆ. ಹಳ್ಳಿಗಾಡಿನಲ್ಲಿ ಬಾಣಂತಿಯರ ಸೇವೆ ಮಾಡುವ ಕಾರ್ಯಕರ್ತೆ ಸ್ವತಃ ಗರ್ಭಿಣಿಯಾದಾಗ ಆಕೆಗೆ ಉತ್ತಮ ಆರೈಕೆ ವ್ಯವಸ್ಥೆ ಇಲ್ಲ. ವಿಧವಾ ವೇತನವು ಇವರಿಗೆ ಸಿಕ್ಕುತ್ತಿಲ್ಲ.

ಇಂದಲ್ಲ ನಾಳೆ ನಮ್ಮ ಸೇವೆ ಖಾಯಂ ಆಗುತ್ತದೆ ಎಂಬ ಭರವಸೆಯಲ್ಲೇ ಬಹುತೇಕರು ಅಂಗನವಾಡಿಗಳಿಗೆ ಸೇರಿದ್ದಾರೆ. ಆದರೆ ಮೂವತ್ತೈದು ವರ್ಷಗಳಾದರೂ ಸರ್ಕಾರ ಈ ಮಹಿಳೆಯರ ಬಗ್ಗೆ ಕಣ್ಣು ತೆರೆಯದಿರುವುದು ಅಮಾನವೀಯ ಎನಿಸುತ್ತದೆ.

ಇನ್ನು ಮುಂದಾದರೂ ಸರ್ಕಾರಗಳು ಸಮಾಜದಲ್ಲಿ ವಿವಿಧ ರೀತಿಯಲ್ಲಿ ಶ್ರಮಿಸುತ್ತಿರುವ ಅಂಗನವಾಡಿ ಕಾರ್ಯಕರ್ತೆಯರ ಬದುಕು ಮತ್ತು ಬವಣೆಗಳ ಕಡೆ ಗಮನ ಹರಿಸಬೇಕು. ಅವರ ಉದ್ಯೋಗ ಖಾಯಂಗೊಳಿಸಬೇಕು ಮತ್ತು ಹಲವಾರು ಸೌಲಭ್ಯಗಳನ್ನು ಒದಗಿಸಬೇಕು. ಇವೆಲ್ಲದರ ಬಗ್ಗೆ ಸರ್ಕಾರ ಚಿಂತನ ಮಂಥನ ನಡೆಸಿ ಸೂಕ್ತ ಕ್ರಮ ಕೈಗೊಂಡು ಅಂಗನವಾಡಿ ಕಾರ್ಯಕರ್ತೆಯರ ಸೇವೆಯನ್ನು ಬಳಸಿಕೊಳ್ಳಬೇಕು.

## ಆಧಾರ ಗ್ರಂಥಗಳು

೧. ಅಂಗನವಾಡಿ ಕಾರ್ಯಕರ್ತೆಯರ ಕೈಪಿಡಿ ೧೯೯೩-೯೪

೨. ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಯೋಜನೆಗಳ ಕೈಪಿಡಿ, ನಿರ್ದೇಶಕರು, ಸರ್ಕಾರಿ ಕೇಂದ್ರ ಮುದ್ರಣಾಲಯ ಪೀಣ್ಯ, ಬೆಂಗಳೂರು.೫೪

೩. ಅಂಗನವಾಡಿ ಕಾರ್ಯಕರ್ತೆಯರಿಗಾಗಿ ಸಮಗ್ರ ಪದ್ಧತಿ, ಶಾಲಾಪೂರ್ವ ಶಿಕ್ಷಣದ ಕೈಪಿಡಿ.

೪. ಐ.ಸಿ.ಡಿ.ಎಸ್. ಸಮಗ್ರ ಬಾಲ ವಿಕಾಸ ಸೇವಾ ಯೋಜನೆ ಕಾರ್ಯಸೂಚಿ, ಮಾನವ ಸಂಪನ್ಮೂಲ ಮಂತ್ರಾಲಯ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಭಾರತ ಸರಕಾರ,

೫. ಯೋಜನಾ

೬. ಸಂವೇದಿ

೭. ಸ್ತ್ರೀ ಪರ ಕಾನೂನುಗಳು ಮತ್ತು ಸಂಘಟನೆಗಳು, ಡಾ.ಹಾಲತಿ ಸೋಮಶೇಖರ, ವಿಸ್ಮಯ ಪ್ರಕಾಶನ, "ಮೌನ", ಎಲ್-೭, ೧ನೇ ತಿರುವು, ೧ನೇ ಹಂತ ಕುವೆಂಪು ನಗರ ಮೈಸೂರು-೫೭೦೦೨೩

೮. ಭಾರತ ಸಮಾಜಕಾರ್ಯ ವಿಶ್ವಕೋಶ ಸಂಪಾದಕ ಡಾ.ಎಚ್.ಎಂ.ಮರುಳಸಿದ್ಧಯ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೧

೯. ಪ್ರಜಾವಾಣಿ ದಿನಪತ್ರಿಕೆ ಚಂದ್ರಕಲಾ ನಂದಾವರ ಸಂದರ್ಶನ, ಮುರಳೀಧರ ಕುಲಕರ್ಣಿ, ಶನಿವಾರ ೨೬ನೇ ಜೂನ್ ೨೦೧೦

೧೦. ಪ್ರಜಾವಾಣಿ ದಿನಪತ್ರಿಕೆ, ಕಿಂಡರ್ ಗಾರ್ಟನ್ ಶಿಕ್ಷಣ ಪದ್ಧತಿಯ ಹುಟ್ಟು, ರವಿವಾರ, ೦೪.೦೭.೧೦

೧೧. ಅಂಗನವಾಡಿ ಕೇಂದ್ರಗಳು ಗ್ರಾಮೀಣ ಅಭಿವೃದ್ಧಿ, ಜನಾರ್ಧನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಅಂಗನವಾಡಿ ಕಾರ್ಯಕರ್ತೆಯರ ತರಬೇತಿ ಕೈಪಿಡಿ, ೧೯೯೪, ಶ್ರೀಮತಿ ಅನಿತ ಕೌರ್, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ ಬೆಂಗಳೂರು, ೧೯೯೪.

೧೩. ಭಾರತ ಸರಕಾರ ಕರ್ನಾಟಕ ರಾಜ್ಯ ಗ್ಯಾಸೆಟಿಯರ, ಗುಲಬರ್ಗಾ ಜಿಲ್ಲೆ, (ಕಲಬುರಗಿ ಜಿಲ್ಲೆ) ೧೯೯೭. ಮುಖ್ಯ ಸಂಪಾದಕರು, ಎಂ.ವಿ.ಪಾಟೀಲ ಮುದ್ರಕರು, ಮ. ಗೀತಾಂಜಲಿ ಪ್ರಿಂಟರ್ಸ್ ಎಂ.ಎಸ್.ರಾಮಯ್ಯ ಕೈಗಾರಿಕಾ ಬಡವಾಣೆ, ಮತ್ತಿಕೆರೆ, ಬೆಂಗಳೂರು ೫೬೦ ೦೫೪.

೧೪. ಭಾರತೀಯ ಸಾಮಾಜಿಕ ಸಂಸ್ಥೆಗಳು, ೨೦೦೩, ಎಂ.ನಂಜಮ್ಮಣ್ಣಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೫. ಗುಲ್ಬರ್ಗಾ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ ಸ್ಥಿತಿಗತಿಗಳು, ಎಂ.ಫಿಲ್. ಸಂಪ್ರಬಂಧ, ರಾಘವೇಂದ್ರ ಹಾರಣಗೇರಿ.



ಅಂಗನವಾಡಿ ಮಕ್ಕಳು ಸೃಜನಶೀಲ ಕಾರ್ಯದಲ್ಲಿ ತೊಡಗಿರುವುದು



ಅಂಗನವಾಡಿ ಕಾರ್ಯಕರ್ತರ ತರಬೇತಿ ಶಿಬಿರ



ಕಾರ್ಯಕರ್ತೆ ಪಲ್ಸ್ ಪೋಲಿಯೋ ಹಾಕುತ್ತಿರುವುದು



ಅಂಗನವಾಡಿ ಮಕ್ಕಳ ಕಲಿಕೆಯನ್ನು ಪರೀಕ್ಷಿಸುತ್ತಿರುವುದು

ಅಂಗನವಾಡಿ ಕೇಂದ್ರದಲ್ಲಿ ಮೇಲಾಧಿಕಾರಿಗಳೊಬ್ಬರ ಜೊತೆ ಮಾತುಕತೆ ನಡೆಸುತ್ತಿರುವ ದೃಶ್ಯ.



ಅಂಗನವಾಡಿ ಕೋಣೆಯಲ್ಲಿ ಕುಳಿತಿರುವ ಮಕ್ಕಳು



ಮಕ್ಕಳೊಂದಿಗೆ ಅಂಗನವಾಡಿ ಕಾರ್ಯಕರ್ತೆ ಭಾವಗೀತೆ ಹಾಡುತ್ತಿರುವುದು



ಮಕ್ಕಳೊಂದಿಗೆ ಕಾರ್ಯಕರ್ತೆಯರು ಮಕ್ಕಳೊಂದಿಗೆ ಆಟವಾಡುತ್ತಿರುವುದು



ಕಾರ್ಯಕರ್ತೆ ಮಗುವಿನ ತೂಕ ನೋಡುತ್ತಿರುವುದು



ಮಕ್ಕಳು ಮಧ್ಯಾಹ್ನದ ಆಹಾರ ಸೇವಿಸುತ್ತಿರುವುದು



ಅಂಗನವಾಡಿ ಮಕ್ಕಳು ಸಂತೋಷದಿಂದ ಕುಣಿಯುತ್ತಿರುವುದು



ಕಾರ್ಯಕರ್ತೆ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ವಿಚಾರಣೆ ಮಾಡುತ್ತಿರುವುದು



ಅಂಗನವಾಡಿ ಮಕ್ಕಳು ತರಗತಿಯಲ್ಲಿ ಕ್ರಿಯಾಶೀಲರಾಗಿ ಕುಣಿಯುತ್ತಿರುವುದು



ಅಂಗನವಾಡಿ ಮಕ್ಕಳು ಉಪ ಆಹಾರ ಸೇವಿಸುವ ಮುಂಚೆ ಪ್ರಾರ್ಥನೆ ಮಾಡುತ್ತಿರುವುದು